# ಕಲಾವಿದನ ತ್ಯಾಗ

ಮತ್ತು

## ಇತರ ಕಥೆಗಳು



ಮೂಲ ಲೇಖಕರು :
ಶ್ರೀ. ಕೆ. ವಿ. ಜಗನ್ನಾಥ್

ಅನುವಾದಕರು :
ಶ್ರೀಮತಿ ಜಯಲಕ್ಷ್ಮೀ ಆರ್. ಶ್ರೀನಿವಾಸ್

ಪ್ರಕಾಶಕರು

**ಸತ್ಯಶೋಧನ ಪ್ರಕಟನ ಮಂದಿರ**

ಕೋಟೆ, ಬೆಂಗಳೂರು ನಗರ

೧೯೪೩

## ವಿಷಯಾನುಕ್ರಮಣಿಕೆ

# ಅ ರ್ಪ ಣೆ

ನನ್ನ ಸೌಭಾಗ್ಯದೇವತೆಯಾದ ಪೂಜ್ಯ ಪತಿದೇವರ
ಪಾದಾರವಿಂದಗಳಲ್ಲಿ ಅತಿ ನಮ್ರತೆ
ಯೊಡನೆ ಈ ಪುಟ್ಟ ಗ್ರಂಥ
ವನ್ನು ಅರ್ಪಿಸುತ್ತೇನೆ.

ಇತಿ,

ಜಯಲಕ್ಷ್ಮೀ
ಆರ್. ಶ್ರೀನಿವಾಸನ್

# ಎರಡು ಮಾತು

ಈಚಿಗೆ ಕೆಲವು ವರ್ಷಗಳಿಂದಲೂ ಅನುವಾದ ಕಾರ್ಯದ ಮೂಲಕ ವಾಗಿಯೂ ಸಹ ಶ್ರೇಷ್ಠ ರೀತಿಯಲ್ಲಿ ಸಾಹಿತ್ಯ ಸೇವೆ ಮಾಡಲು ಸಾಧ್ಯವುಂಟು ಎಂಬ ಹೆಬ್ಬಯಕೆಯುಂಟಾದುದು ಈ 'ಕಲಾವಿದನ ತ್ಯಾಗ' ವೆಂಬ ಅತ್ಯುತ್ಕೃಷ್ಟವಾದ ಕತೆಯನ್ನು ಓದಿದಾಗಲೇ ಎಂದು ಧೈರ್ಯವಾಗಿ ಹೇಳಬಲ್ಲೆನು.

ನಾವು ಸ್ವಂತವಾಗಿ ಬರೆಯುವುದು ಇದ್ದೇ ಇದೆ. ಇತರ ಭಾಷೆಗಳ ಸವಿಯೂಟವನ್ನು ಕನ್ನಡಿಗರಿಗೆ ಉಣಿಸಿ ಕನ್ನಡ ಭಾಷೆಯಲ್ಲಿ ಸಾಹಿತ್ಯ ರೂಪವನ್ನು ತಾಳಿರುವ ಮೃಷ್ಟಾನ್ನ ಭೋಜನವನ್ನು ಇತರ ಭಾಷೆಯವರಿಗೆ ಬಡಿಸಿ, ತನ್ಮೂಲಕ ಪರಸ್ಪರ ಬಾಂಧವ್ಯವನ್ನು ಬಲಪಡಿಸುವುದರಿಂದ ಭಾರತ ಮಾತೆಯು ಸಂತಸಗೊಳ್ಳುವಳೆಂದು ಮನಗಂಡೆನು. ಆ ನನ್ನ ಹೆಬ್ಬಯಕೆಯ ಪರಿಣಾಮವಾಗಿ ಅರಳಿದ ದ್ವಿತೀಯ ಕುಸುಮವು ಈ ಗ್ರಂಥ.

ವಾಚಕ ಮಹಾಶಯರು ಈ ಪುಟ್ಟ ಗ್ರಂಥವನ್ನು ಆದರದಿಂದ ಸ್ವೀಕರಿಸಿ ನನ್ನ ಈ ಉದ್ಯಮಕ್ಕೆ ಪ್ರೋತ್ಸಾಹವಿತ್ತು ಆಶೀರ್ವದಿಸುವರೆಂದು ನಂಬಿರುವೆನು.

ಈ ಗ್ರಂಥವನ್ನು ತಮಿಳಿನಿಂದ ಕನ್ನಡಕ್ಕೆ ಅನುವಾದಿಸಲು ನನಗೆ ಕೃಪೆಯಿಟ್ಟು ಅನುಮತಿಯಿತ್ತ ಈ ಗ್ರಂಥದ ಮೂಲ ಲೇಖಕರೂ ಮದರಾಸಿನ "ಕಲೈಮಗಳ್" ತಮಿಳು ಮಾಸಿಕದ ಸಂಪಾದಕರೂ ಆದ ಮ|| ರಾ|| ವಿದ್ವಾನ್ ಶ್ರೀ ಕೆ. ವಿ. ಜಗನ್ನಾಥನ್‌ರವರಿಗೂ, ಗ್ರಂಥಕ್ಕೆ ಕಸ್ತೂರೀ ತಿಲಕದೋಪಾದಿಯಲ್ಲಿ ಬೆಳಗುವ ಅಪೂರ್ವವಾದೊಂದು ಮುನ್ನುಡಿಯನ್ನು ಬರೆದು ಒದಗಿಸಿದ ಮ|| ರಾ|| ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಬಿ.ಎಲ್. ರವರಿಗೂ, ಮತ್ತು ಗ್ರಂಥವನ್ನು ಅತ್ಯಂತ ಶ್ರಮವಹಿಸಿ ಬಹಳ ಅಂದವಾಗಿ ಪ್ರಚುರಗೊಳಿಸಿಕೊಟ್ಟ ಬೆಂಗಳೂರಿನ ಸತ್ಯಶೋಧನ ಪ್ರಕಟನ ಮಂದಿರಕ್ಕೂ ನನ್ನ ವಿನಯಪೂರ್ವಕವಾದ ಧನ್ಯವಾದಗಳು.

ಈ ಕತೆಗಳಲ್ಲಿ ಕೆಲವು ಮಾತ್ರ "ಜಯಂತಿ" "ಜಯ ಕರ್ಣಾಟಕ" "ಛಾಯಾ" "ವಾಣಿ" "ಸರಸ್ವತಿ" ಮತ್ತು "ದೇಶಬಂಧು" ಸಂಚಿಕೆಗಳಲ್ಲಿ ಬೆಳಕು ಕಂಡಿವೆ. ಆಯಾ ಪತ್ರಿಕಾ ಸಂಪಾದಕರುಗಳಿಗೂ ನನ್ನ ಧನ್ಯವಾದಗಳು.

ನವರಾತ್ರಿ ಪಾಡ್ಯ, ಸ್ವಭಾನು ಸಂ||
೧—೧೦—೪೩

ಜಯಲಕ್ಷ್ಮೀ ಆರ್. ಶ್ರೀನಿವಾಸನ್

# ಮುನ್ನುಡಿ

ಸೋದರಿ ಶ್ರೀಮತಿ ಜಯಲಕ್ಷ್ಮೀ ಆರ್. ಶ್ರೀನಿವಾಸನ್ ಅವರು "ಕಲಾವಿದನ ತ್ಯಾಗ" ಎಂಬ ಹೆಸರಿನಿಂದ ರಚಿಸಿರುವ ತಮಿಳು ಕಥೆಗಳ ಈ ಕನ್ನಡ ಅನುವಾದಕ್ಕೆ ಮುನ್ನುಡಿಯನ್ನು ಬರೆಯುವುದು ನನಗೆ ಬಹಳ ಸಂತೋಷವನ್ನುಂಟುಮಾಡಿದೆ. ಶ್ರೀಮತಿಯವರು ತಮ್ಮ ಗ್ರಂಥಗಳ ಮೂಲಕ ಕನ್ನಡಿಗರಿಗೆ ಚಿರಪರಿಚಿತರಾಗಿದ್ದಾರೆ. ಕನ್ನಡದಲ್ಲಿ ಗ್ರಂಥರಚನೆ ಮಾಡುತ್ತಿರುವ ಸೋದರಿಯರ ಸಂಖ್ಯೆ ತೀರ ಕಡಿಮೆ. ಆದಕಾರಣ, ಶ್ರೀಮತಿಯವರು ತಮ್ಮ ಸಾಹಿತ್ಯ ಸೇವೆಯಿಂದ ನಮ್ಮ ನಾಡಿನ ಮಹಿಳೆಯರಿಗೆ ದೊಡ್ಡದೊಂದು ಮೇಲ್ಪಂಕ್ತಿಯನ್ನು ಹಾಕಿದ್ದಾರೆಂದು ಸಂತೋಷದಿಂದ ಹೇಳಬಹುದಾಗಿದೆ. ಶ್ರೀಮತಿಯವರು "ಸರೋಜ ನಳಿನಿ" ಎಂಬ ಇಂಗ್ಲಿಷ್ ಗ್ರಂಥವನ್ನು ಸರಳವಾದ ತಿಳಿಗನ್ನಡದಲ್ಲಿ ಅನುವಾದ ಮಾಡಿದ್ದಾರೆ. ಆ ಗ್ರಂಥವನ್ನು ಬಹುಮಂದಿ ಓದಿ ಆನಂದಪಟ್ಟಿದ್ದಾರೆ. ಶ್ರೀಮತಿಯವರು ಬರೆದಿರುವ ಅನೇಕ ಕಥೆಗಳು ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ನಮ್ಮ ದೇಶಬಾಂಧವರು ಬಹುಮಂದಿ ಅವುಗಳನ್ನು ಓದಿ ಹರ್ಷಿಸಿದ್ದಾರೆ. ತಮಿಳು ಭಾಷೆ ತಮ್ಮ ತಾಯ್ನುಡಿಯಾಗಿದ್ದೂ ಕೂಡ ಶ್ರೀಮತಿಯವರು ಕನ್ನಡದ ಮೇಲೆ ಮಮತೆ ತೋರಿ, ಕನ್ನಡ ಸಾಹಿತ್ಯವನ್ನು ವ್ಯಾಸಂಗ ಮಾಡಿ ಪರಿಶ್ರಮ ಹೊಂದಿ, ಹೀಗೆ ಶ್ರೇಷ್ಠ ರೀತಿಯಲ್ಲಿ ಕನ್ನಡದ ಸೇವೆ ಮಾಡುತ್ತಿರುವುದು ಕನ್ನಡಿಗರೆಲ್ಲರೂ ಹೆಮ್ಮೆಪಡಬೇಕಾದ ವಿಷಯ. ಇದಕ್ಕಾಗಿ ನಾನು ಅವರನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ.

ಈ ಗ್ರಂಥದಲ್ಲಿ, ತಮಿಳು ಭಾಷೆಯ ಸುಪ್ರಸಿದ್ಧ ಕಥೆಗಾರರಲ್ಲೊಬ್ಬರಾದ ಶ್ರೀಮಾನ್ ಕೆ. ವಿ. ಜಗನ್ನಾಥನ್‌ರವರ ಸ್ವಾರಸ್ಯವಾದ ಕಥೆಗಳನ್ನು ಶ್ರೀಮತಿಯವರು ಕನ್ನಡದಲ್ಲಿ ಅನುವಾದಿಸಿದ್ದಾರೆ. ಅನುವಾದ ಕಾರ್ಯವನ್ನು ಅವರು ವಿಶೇಷ ಜಾಣ್ಮೆಯಿಂದ ನಿರ್ವಹಿಸಿದ್ದಾರೆ. ಅವರು ಈ ಗ್ರಂಥವನ್ನು ರಚಿಸಿ, ಸುಂದರವಾದ ತಮಿಳು ಕಥೆಗಳ ಪರಿಚಯವನ್ನು ಮಾಡಿಕೊಟ್ಟು, ಕನ್ನಡಿಗರಿಗೆ ದೊಡ್ಡ ಉಪಕಾರ ಮಾಡಿದ್ದಾರೆ. ಶ್ರೀಮತಿಯವರ ಸಾಹಿತ್ಯ ಸೇವೆ ಇನ್ನೂ ಹೆಚ್ಚಾಗಿ ಮುಂದುವರಿದು ಕನ್ನಡಿಗರಿಗೆ ಮತ್ತಷ್ಟು ಹರ್ಷವುಂಟಾಗಲೆಂದು ಮನಃಪೂರ್ವಕವಾಗಿ ನಾನು ಹಾರೈಸುತ್ತೇನೆ.

ಬೆಂಗಳೂರು
೧—೧೦—೧೯೪೩

ಸಿ. ಕೆ. ವೆಂಕಟರಾಮಯ್ಯ

# ಕಲಾವಿದನ ತ್ಯಾಗ

೧

ನಾರಾಯಣ ಪಿಳ್ಳೆಗೆ ವಯಸ್ಸು ಎಪ್ಪತ್ತು. ಆತನ ಮುಖದಲ್ಲಿ ಕಾಲದ ಗೀರುಗಳು ಗೀಚಲ್ಪಟ್ಟಿದ್ದುವು. ಎಳೆತನದ ಉಬ್ಬು ಕರಗಿ ಹೋಗಿ, ಕಪೋಲಗಳು ಗುಣಿಬಿದ್ದಿದ್ದುವು. ಆದರೆ, ಅವನ ಕೈಗಳಿಗೆ ಮಾತ್ರ ಹಿಂದಿದ್ದ ಆ ಶಕ್ತಿ ಪೂರ್ತಿಯಾಗಿ ಹೋಗಿರಲಿಲ್ಲ; ಮಣ್ಣಿನಿಂದ ಅದ್ಭುತವಾದ ರೂಪಗಳನ್ನು ಸೃಜಿಸುವ ಕಲ್ಪನಾಚಾತುರ್ಯವೂ ಅಳಿದು ಹೋಗಿರಲಿಲ್ಲ ಆ ಶಕ್ತಿ ಅವನ ಕೈಬೆರಳುಗಳೊಡನೆಯೇ ಹುಟ್ಟಿ ಬಂದಿದೆಯೋ ಎಂಬಂತಿತ್ತು.

ಬರಿಯ ಮಣ್ಣನ್ನು ಕಲಸಿ, ಸೇರಿಸಿ, ಮುದ್ದೆಮಾಡಿ, ಒಣಗಿಸಿ, ಬಣ್ಣಕೊಟ್ಟಲ್ಲಿ, ಅದಕ್ಕೊಂದು ಸೌಂದರ್ಯ, ಸಜೀವತೆಯನ್ನುಂಟುಮಾಡುವ ಇಂದ್ರಜಾಲ ಶಕ್ತಿಯನ್ನು ನಾರಾಯಣ ಪಿಳ್ಳೆಯಲ್ಲಿ ಕಾಣಬಹುದು. ಪಣ್ಣುರುಟಿಯಲ್ಲಿ ಅವನ ಗೊಂಬೆಗಳಿಗೆ ಗಿರಾಕಿ ಬಹಳ.

ಮಣ್ಣಿನ ಹಣತೆಯಲ್ಲಿ ಬಣ್ಣವನ್ನು ಕಲಸಿಟ್ಟುಕೊಂಡು, ಗೊಂಬೆಗಳಿಗವನು ಸರ್ವಸೌಂದರ್ಯವನ್ನೆರೆಯುತ್ತಿದ್ದನು. ಕ್ಷೌರಮಾಡಿಕೊಳ್ಳದೇ ಕೆಲವು ತಿಂಗಳಾದ್ದರಿಂದ, ಬೆಳದಿದ್ದ ಅವನ ದಾಡಿ ಮೀಸೆಗಳು ಅವನ ಮುಖದಲ್ಲಿ ತೀರ ವೃದ್ಧಾಪ್ಯವನ್ನು ತೋರುತ್ತಿದ್ದುವು. ಯಾವುದೋ ಒಂದು ಅದ್ಭುತ ಶಕ್ತಿ ಅವನ ಹೂತುಹೋಗಿದ್ದ ಕಣ್ಣು, ಸವೆದುಹೋಗಿದ್ದ ಬೆರಳು, ಇವುಗಳ ನಡುವೆ ನಿಂತು ಅನುಪಮವಾದ ಸೌಂದರ್ಯವನ್ನು ಸೃಷ್ಟಿಸುವಂತಿತ್ತು.

ಸುತ್ತುಮುತ್ತಲೂ ಗೊಂಬೆಗಳನ್ನಿಟ್ಟುಕೊಂಡು, ಬಣ್ಣ ಹಚ್ಚುತ್ತ, ಮುದುಕನಾದ ನಾರಾಯಣ ಪಿಳ್ಳೆ ತನ್ಮಯನಾಗಿ ಕುಳಿತಿದ್ದ. "ಅಪ್ಪಾ!" ಎಂದು ಕರೆಯುತ್ತ, ತರುಣನೊಬ್ಬನು ಪ್ರವೇಶಿಸಿದನು.

"ಮುರುಗಾ, ಅದನ್ನು ಮುಗಿಸಿಬಿಟ್ಟೆಯಾ ?" ಎಂದು ಮುದುಕನು ಪ್ರಶ್ನಿಸಿದನು. ಮುದುಕನ ಧ್ವನಿಯಲ್ಲಿ ಪ್ರೀತಿ ವಾತ್ಸಲ್ಯಗಳು ತುಂಬಿ ತುಳುಕುತ್ತಿದ್ದುವು.

"ಒಣಗಲು ಇಟ್ಟಿದ್ದೇನೆ. ಇಷ್ಟರಲ್ಲಿ ಒಣಗಿರಬಹುದು, ತರುತ್ತೇನೆ" ಎನ್ನುತ್ತ ಆ ತರುಣನು ಓಡಿ ಹೋಗಿ, ಒಂದು ಗೊಂಬೆಯನ್ನು ತಂದು ಮುದುಕನ ಮುಂದಿಟ್ಟನು.

ಮುದುಕನು ಅದನ್ನು ನೋಡಿದನು, ದಿಟ್ಟಿಸಿ ನೋಡಿದನು. ಅದೊಂದು ಸುಂದರವಾದ ಸ್ತ್ರೀಪ್ರತಿಮೆಯಾಗಿತ್ತು. ರೂಪವತಿಯೊಬ್ಬಳ ಬೆಡಗು-ಬಿನ್ನಾಣ ನಗುಮೊಗದ ಸರ್ವ ಸೌಂದರ್ಯಗಳೆಲ್ಲ ಆ ಗೊಂಬೆಯಲ್ಲಿ ಸಂಪ್ರಾಣತೆವೆತ್ತಂತೆ ಎದ್ದು ಕಾಣಿಸುತ್ತಿದ್ದುವು. ವೃದ್ಧ ಕಲಾವಿದನು ಆ ವರ್ಣವೈಚಿತ್ರ್ಯದಲ್ಲಿ ಹುದುಗಿಕೊಂಡಿದ್ದ ಅದ್ಭುತವನ್ನು ಕಣ್ಣಿನಿಂದಲೇ ಅಳತೆಮಾಡಿ ನೋಡಿದನು. ಮುದುಕನ ಹೃದಯ ಭಾವಪೂರ್ಣವಾಯಿತು; ಮನಸ್ಸು ಕಲ್ಪನಾಮಯವಾಯಿತು. ಒಂದು ನಿಟ್ಟುಸಿರು ಬಿಟ್ಟನು. ಅದರಲ್ಲಿ ಎಷ್ಟೊಂದು ಉಷ್ಣತೆ !

"ನೀನು ಚೆನ್ನಾಗಿರಬೇಕು ! ನಿನ್ನ ಬಾಳು ಸುಖಮಯವಾಗಲಿ !" ಎಂದು ಮುದುಕನು ತರುಣನನ್ನು ಹರಸಿದನು.

"ಅಪ್ಪಾ, ನನಗೀಗ ಬಿಡುವಿಲ್ಲ. ಅಣ್ಣನೊಂದು ಕೆಲಸ ಹೇಳಿದ್ದಾನೆ, ಮಾಡಲೇಬೇಕು" ಎನ್ನುತ್ತಾ ಮುರುಗನು ಅಂಗಳಕ್ಕಿಳಿದು ಕಣ್ಮರೆಯಾದನು.

೨

ಗುಡಿಗಾರನಾದ ಮುದುಕ ನಾರಾಯಣ ಪಿಳ್ಳೆಗೆ ಮುರುಗ ಮಗನಲ್ಲ; ಸಾಕುಮಗ. ನಾರಾಯಣ ಪಿಳ್ಳೆಗೆ ಒಬ್ಬ ಮಗನಿದ್ದಾನೆ. ಮುರುಗನಿಗೆ ಕೆಲಸ ಹೇಳುವ "ಅಣ್ಣನು" ಅವನೇ.

ಕೃಷ್ಣನು ಸುಗುಣಿ. ತನ್ನ ವೃದ್ಧ ತಂದೆಯ ಘನತೆ ಗೌರವ—ಕಲಾಕೌಶಲ್ಯಗಳನ್ನೆಲ್ಲ ಅವನು ಚೆನ್ನಾಗಿ ಅರಿತಿದ್ದನು. ಆ ಕಲೆಯನ್ನೇ—ಆ ಕಸಬನ್ನೇ ಅವನೂ ಕಲಿತಿದ್ದನು. ನಿಜವಾಗಿ ಹೇಳುವುದಾದರೆ, ಕೃಷ್ಣನಿಗೆ

ಕಲಾಕೌಶಲ್ಯವು ಬರಲಿಲ್ಲ, ಕಸಬು ಮಾತ್ರವೇ ಬಂದಿತು ! ತಂದೆಯೊಟ್ಟಿಗೆ ತಾನೂ ಗೊಂಬೆಗಳನ್ನು ಮಾಡಿದನು, ಮಾರಿದನು, ಹಣ ಗಳಿಸಿದನು. ಅಷ್ಟೆ. ಯಂತ್ರದಿಂದ ಒಂದೇ ಎರಕದಲ್ಲಿ ಹುಯ್ದಂತಿದ್ದುವು ಆತನ ಗೊಂಬೆಗಳು ! ಇಬ್ಬರೂ ಉಪಯೋಗಿಸುವ ಬಣ್ಣವೊಂದೇ, ಮಣ್ಣೂ ಒಂದೇ. ಆದರೆ, ಕೃಷ್ಣನ ಕೈ ಕಲಾವಿದನ ಕೈಯಲ್ಲ.

ಮುದುಕನು ಕೆಲವೊಮ್ಮೆ ತನ್ನ ಕುಮಾರನ ದೌರ್ಬಲ್ಯವನ್ನು—ಕಲಾ ಶೂನ್ಯತೆಯ ದೌರ್ಬಲ್ಯವನ್ನು—ನೆನೆದು ಮರುಗುವನು. “ಏನಾದರೂ ಜೀವನೋಪಾಯವಿದ್ದರೆ ಸಾಕೆ? ಮಣ್ಣಿನ ಗೊಂಬೆಮಾಡಿ, ಮಾರಿ, ಹಣ ಗಳಿಸುವ ಕಸಬನ್ನಷ್ಟೆ ಕಲಿಯಲು ಇವನು ಹುಟ್ಟಿದನೆ? ಕೊಂಡುಕೊಳ್ಳು ವವರ ಹೃದಯಗಳಲ್ಲವೇ ಗೊಂಬೆಗಳ ಬೆಲೆ? ಕಂಡವರ ಹೃದಯವನ್ನು ಸೆಳೆದುಕೊಳ್ಳುವಂತೆ ಮಾಡುವುದೇ ಕಲಾವಿದನ ನಿಜವಾದ ಕೌಶಲ್ಯ. ಅದೇ ಕಲೆಯ ನಿಜವಾದ ಬೆಲೆ . . .” ಎಂದು ಮುಂತಾಗಿ ನೆನೆದು ಮುದುಕನ ಮನಸ್ಸು ತನ್ನ ಮಗ ಕೃಷ್ಣನಿಗಾಗಿ ಮರುಗುವುದು. ಕೃಷ್ಣನಿಗಾದರೋ ಈಗಾಗಲೇ ಮೂವತ್ತು ವರ್ಷ ವಯಸ್ಸು. ಇನ್ನು ಮೇಲೆ ಅವನೊಬ್ಬ ಕಲಾ ಕೋವಿದನಾಗಿ ಮಾರ್ಪಡುವನೆಂಬ ಮಾತು ಸ್ವಪ್ನದಲ್ಲಿ ಸಹಾ ಬರಲಾರದು. “ನಮ್ಮ ಪರಂಪರೆಗೆ ಇದೊಂದು ಕಲಂಕ ಬಂದಂತಾಯಿತಲ್ಲಾ!” ಎಂಬ ಚಿಂತೆಯಲ್ಲಿ ಮುದುಕ ಕಲಾವಿದನು ಮುಳುಗಿಹೋದನು.

ಈ ಚಿಂತಾಸಮುದ್ರದಿಂದ ಆ ಮುದಿಹೃದಯವನ್ನೆತ್ತಿ ಆಶೋತ್ಸಾಹ ಗಳನ್ನು ತುಂಬಿದವನು ಮುರುಗ. ಹೋರಿ ಕರುವಿನಂತೆ ಅವನು ಚಿಮ್ಮಿ ನೆಗೆಯುತ್ತಾ ಬಂದನು. ಅವನ ಕೈಬೆರಳುಗಳು ವಸಂತಕಾಲದ ಮಂದ ಮಾರುತದಲ್ಲಿ ಒಯ್ಯಾರದಿಂದ ಅಲುಗಾಡುತ್ತಿರುವ ಎಳೆಯ ಚಿಗುರುಗಳಂತೆ ಸರಿದಾಡುತ್ತಿದ್ದುವು. ಅವನು ಈ ಮುದುಕ ಕಲಾವಿದನಲ್ಲಿ ಶಿಷ್ಯನಾಗಿ ಸೇರಿ ಕೊಂಡನು. “ಕೂಲಿ ಬೇಡ, ಅನ್ನಹಾಕಿ ಕಸಬು ಕಲಿಸಿದರೆ ಸಾಕು,” ಎಂದು ಅವನು ಅಂಗಲಾಚಿ ಬೇಡಿಕೊಂಡಿದ್ದನು. ಅವನ ಉತ್ಸಾಹಯುತ ಮುಖದ ಮೇಲಿನ ಕಲಾವಿಲಾಸದ ಕಳೆಯನ್ನು ಕಂಡು ನಾರಾಯಣ ಪಿಳ್ಳೆಯು ಅವನನ್ನು ತನ್ನ ಶಿಷ್ಯನನ್ನಾಗಿ ಪರಿಗ್ರಹಿಸಿಕೊಂಡನು. ಅಂದಿನಿಂದ ಈ ಹತ್ತು ವರ್ಷ ಮುರುಗನು ಮುದುಕ ಕಲಾವಿದನೊಟ್ಟಿಗಿದ್ದಾನೆ. ಇಬ್ಬರ ನಡುವೆ

ಪರಸ್ಪರ ಪುತ್ರವಾತ್ಸಲ್ಯ - ಪಿತೃಭಕ್ತಿಗಳು ಬೆಳೆದುಬಂದಿವೆ. ತನ್ನ ಕಲಾ ಕೌಶಲ್ಯವು ಈ ಪ್ರಪಂಚದಲ್ಲಿ ಶಾಶ್ವತವಾಗಿ ನಿಲ್ಲುವಂತೆ ಮಾಡಲು, ದೇವರೇ ಮುರುಗನನ್ನು ತನ್ನೆಡೆಗೆ ಕಳುಹಿಸಿದನೆಂದು ನಾರಾಯಣ ಪಿಳ್ಳೈ ನಂಬಿ ಕೊಂಡಿದ್ದನು. ಮುರುಗನಾದರೂ "ಅಪ್ಪಾ" ಎಂದೇ ಆತನನ್ನು ಸಂಬೋಧಿಸುತ್ತಿದ್ದನು.

೩

ಮರೆಮೋಸಗಳಿಲ್ಲದ ಕೃಷ್ಣನ ಹೃದಯದಲ್ಲೀಗ ಚಿಕ್ಕದಾದ ಕಪ್ಪುಕಲೆ ಯೊಂದುತೋರಲಾರಂಭಿಸಿತು! "ಎಲ್ಲಿಂದಲೋ ಬಂದ; ಕೂಲಿ ಬೇಡ, ಅನ್ನ ಹಾಕಿದರೆ ಸಾಕು, ಕೆಲಸ ಮಾಡುತ್ತೇನೆ" ಎಂದ; ಈಗ ನನ್ನ ಅಪ್ಪನನ್ನು ತನ್ನ ಅಪ್ಪನನ್ನಾಗಿ ಮಾಡಿಕೊಂಡಿದ್ದಾನೆ! ಈ ಮುದುಕನೂ ಅವನನ್ನು ಅಟ್ಟಕ್ಕೇ ರಿಸಿ ಮಾತಾಡುತ್ತಾನೆ! ನನಗಿಂತಲೂ ಆತನ ಮೇಲೆ ಅತಿಶಯ ಪ್ರೇಮವಿಟ್ಟಿ ದ್ದಾನೆ!!" ಎಂದು ಮುಂತಾಗಿ ಕೃಷ್ಣನು ಚಿಂತಿಸತೊಡಗಿದನು. ಅಸೂಯೆ ಯೆಂಬ ಅಗ್ನಿಜ್ವಾಲೆಯ ಒಂದು ಕಿಡಿ ಅವನೆದೆಯಲ್ಲಿ ಮೂಡಿತು. ತಾನು ಕಲಾಕುಶಲನಲ್ಲವೆಂಬ ತನ್ನ ಹೀನಸ್ಥಿತಿಯ ನೆನಪು ಆ ಕಿಡಿಯನ್ನೂದಿ ಮಹಾ ಜ್ವಾಲೆಯನ್ನುಂಟುಮಾಡಿತು.

ಕಸಬನ್ನಷ್ಟೆ ಕಲಿಯಲು ಬಂದಿದ್ದ ಮುರುಗನು ಕಲೆಯನ್ನೇ ಕೈವಶ ಮಾಡಿಕೊಂಡನು. ಅವನ ಕೈ ಮುದುಕನ ಕೈಗಿಂತ ವೇಗವಾಗಿ ಓಡಿತು. ನಾರಾಯಣ ಪಿಳ್ಳೈಗೆ ಕಲ್ಪನೆ ಅಧಿಕ; ಆದರೆ ಅವುಗಳನ್ನೆಲ್ಲ ರೂಪುಗೊಳಿಸು ವುದಕ್ಕೆ ಅವನ ಕೈಬೆರಳುಗಳಲ್ಲಿ ಜೀವಶಕ್ತಿ ಕುಗ್ಗಿ ಹೋಗಿದೆ; ವಯೋಭಾರ ದಿಂದಾಗಿ ಅವನ ಹಿಂದಿನ ಹುರುಪು ತಗ್ಗಿಹೋಗಿದೆ. ವೃದ್ಧಾಪ್ಯದ ಪರಿಣಾಮ ವಾಗಿ ಅಂಗಾಂಗಳು ಗಳಿತವಾಗಿದ್ದರೂ, ಮನಸ್ಸಿಗೆಲ್ಲಿಯ ಮುಪ್ಪು? ಅದರ ಕಲ್ಪನಾಶಕ್ತಿ ಎಂದಿನಂತೆಯೇ ಪ್ರಖರವಾಗಿದೆ. ಅವನ ಮನಸ್ಸಿನಲ್ಲುದಯಿ ಸುವ ಕಲಾಕಲ್ಪನೆಗಳೆಲ್ಲ, ಕಲ್ಪನೆಗಳಾಗಿಯೇ ಇದ್ದು, ನಂದಿ ಹೋಗದಂತೆ ಮಾಡಲು ಎಳೆಗುವರನಾದ ಮುರುಗನೀಗ ದೊರಕಿದ್ದಾನೆ. ಮುದುಕನ ಹೃನ್ಮನಗಳನ್ನು ಹೊಕ್ಕು, ಅಲ್ಲಿ ಉದ್ಭವಿಸಿದ ಎಲ್ಲ ಕಲ್ಪನೆಗಳನ್ನರಿತು ಮುರುಗನು ತನ್ನ ಕೈಬೆರಳುಗಳ ಚಾತುರ್ಯದಿಂದ ರೂಪುಗೊಟ್ಟು ತೋರಿ

ಸುತ್ತಿದ್ದಾನೆ. ಮುದುಕನ ಕಲ್ಪನೆಯ ವ್ಯಕ್ತಿಗಳು ಮುರುಗನ ಕೈಯ ಮೂಲಕವಾಗಿ ನೈಜ ವ್ಯಕ್ತಿಗಳಾಗಿ ಹೊರಬೀಳುವುವು. ಮುದುಕನು ನೆನೆದುದನ್ನು ಮುರುಗನು ಮಾಡುವನು! ಇಂಥವನನ್ನು ಮುದುಕನಾದ ನಾರಾಯಣ ಪಿಳ್ಳೈ ತನ್ನ ಪ್ರಾಣಪಕ್ಷಿಯಂತೆ ಭಾವಿಸಿ ಪ್ರೀತಿಸಿದರೆ ಅದು ಯಾರ ತಪ್ಪು? ಆದರೆ ಹೊಟ್ಟೆಯುರಿಚ್ಚಿನ ಹೊಗೆಯಿಂದ ಮಸಕಾಗಿದ್ದ ಕೃಷ್ಣ ಪಿಳ್ಳೈಯ ಕಣ್ಣುಗಳಿಗೆ ಇದು ಹೊಳೆಯಲಿಲ್ಲ!

೪

ನವರಾತ್ರಿ ಸಮೀಪಿಸುತ್ತಲಿದ್ದಿತು. ನಾರಾಯಣ ಪಿಳ್ಳೈಯ ಮನೆಯ ಗೊಂಬೆಗಳು ಅಧಿಕವಾಗಿ ಖರ್ಚಾದುವು. ಮುರುಗ ಮಾಡಿದ ಗೊಂಬೆಗಳಿಗೆ ಬಹಳ ಬೆಲೆ ಬಂದಿತು. ಮದರಾಸಿನಿಂದ ಒಮ್ಮೆಗೇ ಐನೂರು ರೂಪಾಯಿಯ ಗೊಂಬೆಗಳಿಗೆ 'ಆರ್ಡರ್' ಬಂತು. ಮನೆಯಲ್ಲಿದ್ದವರೆಲ್ಲರೂ ಬಿಡುವಿಲ್ಲದೆ ದುಡಿದು ಬೇಕಾದಷ್ಟು ಗೊಂಬೆಗಳನ್ನು ತಯಾರಿಸಿದರು. ಮುದುಕ ನಾರಾಯಣ ಪಿಳ್ಳೈಯು ಸಹಾ ಕೆಮ್ಮುತ್ತ ತನ್ನಿಂದಾದಷ್ಟು ಗೊಂಬೆಗಳನ್ನು ತಯಾರಿಸಿದನು. ಮುರುಗನೂ ಮಾಡಿದನೆಂದು ಬೇರೆ ಹೇಳಬೇಕಾಗಿಲ್ಲವಷ್ಟೇ? ಕೃಷ್ಣ ಪಿಳ್ಳೈಯು ಬಹಳವಾಗಿ ಕೆಲಸ **ಮಾಡಿದ**ನೆಂದು ಹೇಳಲಾಗದು; ಬಹಳ ಕೆಲಸ **ಮಾಡಿಸಿದ**ನೆಂದು ಮಾತ್ರ ಹೇಳಬಹುದು. ಆತನು ಮುದುಕನನ್ನು ಬಹಳ ಹುರಿದುಂಬಿಸಿದನು. "ಹಣ ಸಿಗುವಾಗ ಕೆಲಸ ಮಾಡಿದರೆ ಅನಂತರ ವಿಶ್ರಾಂತಿ ಸಿಗುತ್ತದೆ" ಎಂದು ಹೇಳಿ ಹೇಳಿ ಕೆಲಸಮಾಡಿಸಿದನು.

ಹೀಗೆ ಸಿದ್ಧಪಡಿಸಿದ ಎಲ್ಲ ಗೊಂಬೆಗಳನ್ನೂ ಕೃಷ್ಣನು ಅಚ್ಚುಕಟ್ಟಾಗಿ ಪೆಟ್ಟಿಗೆಯಲ್ಲಿಟ್ಟು ರೈಲ್ವೇ ಸ್ಟೇಷನ್ನಿಗೆ ಒಯ್ದು, ಮದ್ರಾಸಿಗೆ ಕಳುಹಿಸಿದನು. ಅವನೊಡನೆ ಸ್ಟೇಷನ್ನಿಗೆ ಮುರುಗನೂ ಹೋಗಿದ್ದನು. ಮುರುಗನಿರುವುದರಿಂದ ತನಗೆ ಇಷ್ಟೊಂದು ಹಣ ಸಿಗುತ್ತದೆಂಬುದನ್ನು ಕೃಷ್ಣನು ಈ ದಿನ ಚೆನ್ನಾಗಿ ತಿಳಿದುಕೊಂಡನು. ಅದರಿಂದ ಅವನ ಮನಸ್ಸು ಮುರುಗನ ವಿಷಯದಲ್ಲಿ ಸ್ವಲ್ಪ ಸಮಾಧಾನ ಹೊಂದಿತು.

"ತಮ್ಮಾ, ನಿನಗೆ ಮದುವೆ ಮಾಡಬೇಡವೇ ?" ಎಂದು ಅವನು ಮುರುಗನನ್ನು ಕೇಳಿದನು.

ಇಂತಹ ಸವಿನುಡಿಗಳನ್ನವನು ಕೃಷ್ಣ ಪಿಳ್ಳೆಯಿಂದ ಎಂದೂ ಕೇಳಿದ್ದಿಲ್ಲ, ನಿರೀಕ್ಷಿಸಿಯೂ ಇಲ್ಲ. ಈ ಮಾತು ಅವನ ಕಿವಿಗೆ ಬಿದ್ದಾಗ ಯಾವುದೋ ಅಮೃತವರ್ಷವು ವರ್ಷಿಸಿದಂತಾಯಿತು 'ವಿವಾಹ'ದ ಮಾತಿಗಾಗಿ ಅವನು ಸಂತೋಷಿಸಲಿಲ್ಲ; ಎಂದೂ ಪ್ರೀತಿಯನ್ನು ತೋರಿರದ ತನ್ನ "ಅಣ್ಣನು" ಇಂದು ಇಷ್ಟೊಂದು ಪ್ರೇಮದ ಮಳೆಗರೆದನೆಂಬುದೇ ಮುರುಗನ ಆನಂದಕ್ಕೆ ಕಾರಣವಾಗಿದೆ.

"ಎಲ್ಲಿಂದಾದರೂ ಒಳ್ಳೆಯ ಹುಡುಗಿಯನ್ನು ಹುಡುಕಿ ತಂದು, ಮುರುಗನ ಕೊರಳಿಗೆ ಕಟ್ಟಬೇಕೆಂದು ಅಪ್ಪನು ಕೂಡಾ ಹೇಳುತ್ತಿರುತ್ತಾನೆ." ಎಂದು ಕೃಷ್ಣನು ಮಾತು ಮುಂದರಿಸಿದನು.

ಮುರುಗನು ಮುಗುಳ್ನಕ್ಕನು; ಆ ನಗುವಿನಲ್ಲಿ ನಾಚಿಕೆ ಇತ್ತು. ಹೀಗೆ ಮಾತಾಡುತ್ತಾ ಇಬ್ಬರೂ ಸ್ಟೇಷನ್ನಿಂದ ಅಂಗಡಿ ಬೀದಿಯ ಮಾರ್ಗವಾಗಿ ಬರುತ್ತಿದ್ದರು. ಕಾಲ ಸಂಧ್ಯಾಕಾಲವಾಗಿತ್ತು. ಆಗ ಹಠಾತ್ತಾಗಿ "ಮುರುಗಾ ಮುರುಗಾ ! ಇಷ್ಟು ವರ್ಷಗಳವರೆಗೆ ನಿನ್ನನ್ನು ಎಲ್ಲೆಲ್ಲೋ ಹುಡುಕಿದೆನಲ್ಲ!" ಎಂಬ ಧ್ವನಿ ಕೇಳಿಸಿತು. ಇಬ್ಬರೂ ತಿರುಗಿ ನೋಡಿದರು. ಕಪ್ಪು ಮೈಬಣ್ಣದ ಬತ್ತಿಹೋದ ಅವಯವಗಳ ಮನುಷ್ಯನೊಬ್ಬನು ಮುರುಗನ ಕಡೆ ಧಾವಿಸಿ ಬರುತ್ತಿದ್ದನು. ಆತನ ಕೈಗಳಲ್ಲಿ ಮಾರಲು ತಂದ ಚಪ್ಪಲುಗಳಿದ್ದವು; ಕಣ್ಣಲ್ಲಿ ಹನಿಯೊಡೆದಿತ್ತು. ಅವನೊಬ್ಬ ಚಮ್ಮಾರನು ; ಕಳೆದ ಒಂದು ವರ್ಷದಿಂದ ಅವನು ಪಣ್ಣರುಟಿಯಲ್ಲಿ ಈ ಕಸಬು ಮಾಡಿಕೊಂಡು ಜೀವಿಸುತ್ತಲಿದ್ದಾನೆ. ಅವನು ಚಮ್ಮಾರನೆಂಬುದು ಕೃಷ್ಣಪಿಳ್ಳೆಗೆ ಗೊತ್ತಿದೆ; ಮುರುಗನಿಗೆ ಮಾತ್ರ ಗೊತ್ತಿದ್ದಿಲ್ಲ! ಗೊತ್ತಿದ್ದರೂ ಇರಬಹುದು; ಆದರೆ ಕೃಷ್ಣ ಪಿಳ್ಳೆಯ 'ತಮ್ಮ' ನಾಗಿ ಬಾಳಿದ ಮುರುಗನಿಗೆ ಗೊತ್ತಿಲ್ಲವೇ ವಿನಾ ಅದಕ್ಕೂ ಹಿಂದಿನ ಮುರುಗ ನಿಗೆ ಗೊತ್ತಿಲ್ಲದಿಲ್ಲ. ಚೆನ್ನಾಗಿ ಗೊತ್ತುಂಟು. ಆತನು ತಿರುನಲ್ವೇಲಿ ಯವನು.

ಇಬ್ಬರೂ ನಿಂತುಬಿಟ್ಟರು. ಚಮ್ಮಾರನು ಓಡಿಬಂದನು. ಮುರುಗನ ಮೈಯಲ್ಲಿ ಪುಲಕಗಳೆದ್ದುವು. ಕೃಷ್ಣನಿಗೆ ಮಾತ್ರ ಇದು ತೋರಲಿಲ್ಲ.

"ಅಯ್ಯೋ ! ನಿನ್ನನ್ನಗಲಿದ ಮೇಲೆ, ನಿನ್ನ ತಾಯಿ ನಿನ್ನನ್ನು ನೆನೆನೆನೆದು, ಕೃಶಳಾಗಿ, ತೀರಿಕೊಂಡಳು. ನೀನು ನನ್ನೊಟ್ಟಿಗೆ ಇರುತ್ತಿದ್ದರೆ, ಈ ಮುದಿತನದಲ್ಲಿ ನಾನು ಇಷ್ಟು ಕಷ್ಟಪಡುತ್ತಿದ್ದೆನೆ ? '' ಎಂದು ಅವನು ತೆಲುಗಿನಲ್ಲಿ ಗೋಳಿಟ್ಟನು.

ಈ ದೃಶ್ಯದ ಅರ್ಥವು ಕೃಷ್ಣನಿಗೆ ಒಮ್ಮೆಗೇ ಹೊಳೆಯಲಿಲ್ಲ. ಒಂದು ವೇಳೆ ಹೊಳೆದಿದ್ದರೂ, ಅವನದನ್ನು ನಂಬದಾದನು. ತನ್ನ "ತಮ್ಮ" ಮುರುಗನು ಅಸ್ಪೃಶ್ಯ ಚಮ್ಮಾರನ ಮಗನೆ ?

"ಏನೋ ? ಮನಬಂದಂತೆ ಮಾತನಾಡುವೆ ?" ಎಂದು ಕೃಷ್ಣನು ಅವನನ್ನು ಗದರಿಸಿದನು.

"ಅಯ್ಯೋ, ಸ್ವಾಮಿ ! ಇವನು ನನ್ನ ಮಗ. ಇವನಿಗಾಗಿ ನಾನು ಎಷ್ಟೊಂದು ಕಷ್ಟಪಟ್ಟಿರುವೆನು ! ಇಲ್ಲಿ ಇವನಿರುವುದು ಮುಂಚೆಯೇ ತಿಳಿಯದೇ ಹೋಯಿತಲ್ಲಾ !' ಎಂದು ಅವನು ಹಲುಬಿದನು. ಅವನ ವಾತ್ಸಲ್ಯವು ಮೇರೆ ಮೀರಿ ಹರಿಯಿತು. ಆದರೆ ಅದರ ಪರಿಣಾಮವಾಗಿ ಒಂದು ಭಾರೀ ಆಪತ್ತುಂಟಾಗುವುದೆಂಬುದನ್ನು ಅವನು ಅರಿಯಲಿಲ್ಲ.

ಕೃಷ್ಣನು ದೆವ್ವ ಬಡಿದವನಂತಾದನು ! ಕೈಯಲ್ಲಿದ್ದ ಕೊಡೆಯೇ ಅವನಿಗೆ ಆಯುಧವಾಯಿತು ; "ಎಲೋ ಪಾತಕಿ ! ಚಂಡಾಲಾ ! ಚಮ್ಮಾರ ನಾಯಿ ! ನನ್ನ ಮನೆತನಕ್ಕೆ ಕಳಂಕ ತಂದ ಪಾಪಿ ! ನನ್ನ ಮನೆಯಲ್ಲಿ ಉತ್ತಮ ಜಾತಿಯವನಂತೆ ಬಂದು ಬೆಳೆದು ನಮ್ಮನ್ನು ಮೋಸಗೊಳಿಸಿದ ದ್ರೋಹಿ . . .'' ಅವನ ಅಸೂಯೆ, ಜಾತಿಯ ಗರ್ವ, ಅಪಮಾನ ಮುಂತಾದ ಹಲವು ಕಾರಣಗಳೂ ಒಟ್ಟುಗೂಡಿದವು. ಬಾಯಿಂದ ಹೊರಟ ಬೈಗುಳ ಪ್ರವಾಹಕ್ಕೆ ತಡೆಯೇ ಇದ್ದಿಲ್ಲ. ಮುರುಗನನ್ನು ಹೊಡೆದು ಬಡಿದು ಕೊಡೆ ಕಿತ್ತುಹೋಯಿತು. ಮುರುಗನ ಮೈ ರಕ್ತಮಯವಾಯಿತು. ಇದನ್ನು ನೋಡಿ ಜನರ ಒಂದು ಗುಂಪುಗೂಡಿತಲ್ಲಿ.

"ಅಯ್ಯೋ, ಪಾಪ ! ಎಷ್ಟೊಂದು ಒಳ್ಳೆಯ ಹುಡುಗ ! ಇವನನ್ನು ಚಮ್ಮಾರನೆಂದು ಹೇಳುವುದು ಸುಳ್ಳು ! ಇದನ್ನು ಚೆನ್ನಾಗಿ ವಿಚಾರಿಸಬೇಕು'' ಎಂದು ಕೆಲವರು ಹೇಳಿದರು.

"ಕಾಲವು ಕಲಿಕಾಲ. ಈ ಪಾಪವು ಏಳೇಳು ಜನ್ಮಕ್ಕೂ ತೀರುವುದಿಲ್ಲ. ಎಷ್ಟೊಂದು ಧೈರ್ಯವಪ್ಪ ಈ ಹುಡುಗನಿಗೆ! ಚಮ್ಮಾರ ಹುಡುಗಾ! ಜಾತಿಯನ್ನು ಮರೆಯಿಸಿ, ಮೇಲುಜಾತಿಯವರೊಡನೆ ಉಂಡು, ಉಟ್ಟು, ಬಾಳುವುದೆಂದರೆ? ಇದಕ್ಕಿಂತ ಕೊಲೆಮಾಡಿ ಬಿಡುವುದೇ ಮೇಲಲ್ಲವೆ?"

"ಈ ಹುಡುಗನನ್ನು ಇಷ್ಟಕ್ಕೇ ಬಿಡಬಾರದು. ಸಂದುಸಂದಿಗೂ ಹೊಡೆದೋಡಿಸಬೇಕು!"

ಈ ರೀತಿಯಲ್ಲಿ ಮಹಾಜನರು ಈ ಪರಿತಾಪಕರವಾದ ನಾಟಕವನ್ನು ಕುರಿತು ವಿಮರ್ಶೆಮಾಡಿಕೊಂಡಿದ್ದರು.

ಕೃಷ್ಣನು, ಮೂರ್ಛೆಹೊಂದುವವರೆವಿಗೆ ಮುರುಗನನ್ನು ಹೊಡೆದು ಬಿಟ್ಟು ಬುದ್ಧಿಭ್ರಮೆಹೊಂದಿದವನಂತೆ ಮನೆಗೆ ಓಡಿದನು. ಅವನಿಗೆ ಒಂದೇ ಉಸಿರಿಗೆ ಆ ಮುದುಕನನ್ನು—ತನ್ನ ತಂದೆಯನ್ನು—ಹೊಡೆದು ಕೊಂದುಬಿಡಬೇಕೆಂಬ ಆತುರ ಉಂಟಾಯಿತು. ಅವನಲ್ಲವೇ ಆ ಹುಡುಗನನ್ನು ಮನೆಯಲ್ಲಿ ಸೇರಿಸಿಕೊಂಡು ಸಾಕಿದವನು? ಮಗನಿಗಿಂತ ಹೆಚ್ಚಾಗಿ ವಾತ್ಸಲ್ಯ ತೋರಿಸಿದವನು? ಮಗನಂತೆ ಕೊಂಡಾಡಿದವನು? ತನ್ನನ್ನು ಕೂಡ ಅಲಕ್ಷ್ಯ ಮಾಡಿದನು! —ಅಸೂಯೆಯ ಅಗ್ನಿಜ್ವಾಲೆಯಿಂದ ಹೊರಟ ಯೋಚನೆಗಳಿವು. ಅವನು ಮುರುಗನ ಕಲಾಕೌಶಲ್ಯವನ್ನು ಮರೆತನು! ಮುರುಗನು ಮಾಡಿದ ದೊಡ್ಡ ಪಾಪಕೃತ್ಯಕ್ಕೆ ಮುದುಕನು ಕೂಡ ಕಾರಣನು ಎಂದೇ ಕೃಷ್ಣನು ತಿಳಿದನು. "ಇನ್ನು ಮೇಲೆ ಮುದುಕನು ಮುರುಗನನ್ನು ಹೊಗಳಲಾರನು" ಎಂದು ಯೋಚಿಸಿದಾಗ ಕೃಷ್ಣನಿಗೆ ಒಂದು ಬಗೆಯ ಸಮಾಧಾನ ಉಂಟಾಯಿತು. ಬಹಳ ಕಾಲದಿಂದ ಇದ್ದ ಒಬ್ಬ ಶತ್ರುವನ್ನು ಜಯಿಸಿದಂಥ ಸಮಾಧಾನವದು.

ಚಮ್ಮಾರನಾದ ಮುದುಕನು, ಜ್ಞಾನತಪ್ಪಿ ಬಿದ್ದ ತನ್ನ ಮಗನನ್ನು—ಇನ್ನು ಮೇಲೆ ಮುರುಗನು ಆ ಚಮ್ಮಾರನ ಮಗನಲ್ಲವೆ?—ಮೆಲ್ಲಗೆ ಎತ್ತಿ ಮುಖದಲ್ಲಿ ನೀರೆರಚಿ ಮೆತ್ತಗೆ ಗುಡಿಸಲಿಗೆ ಕರೆದುಕೊಂಡು ಹೋದನು. ಅವನಿಗೆ ವಿಷಯ ಬಗೆಹರಿಯಿತು! "ಅಯ್ಯೋ! ನಾನು ಮಹಾಪಾತಕಿ! ನನ್ನ ಪ್ರೀತಿಪಾತ್ರನಾದ ಮಗನಿಗೆ ಬಂದ ಬದುಕನ್ನೆಲ್ಲವನ್ನೂ ಹೋಗಲಾಡಿಸಿದೆನಲ್ಲಾ!" ಎಂದು ಅತ್ತನು.

ಕೃಷ್ಣನು ಆವೇಶದೊಡನೆ ತನ್ನ ಮನೆಗೆ ಓಡಿಬಂದನು. ಮುದುಕನು ಮುರುಗನನ್ನೂ ಕೃಷ್ಣನನ್ನೂ ನಿರೀಕ್ಷಿಸುತ್ತಾ ಜಗುಲಿಯಲ್ಲಿ ಕುಳಿತಿದ್ದನು. "ನೀನು ನಾಶವಾಗಿ ಹೋಗು! ನಿನ್ನಿಂದಲ್ಲವೇ ಈ ಮನೆತನಕ್ಕೆ ಕಳಂಕ ಉಂಟಾಯಿತು? ಆ ಪಾತಕಿಯನ್ನು ಎಷ್ಟೊಂದು ಮುದ್ದು ಮಾಡಿದೆ?" ಎಂದು ಘರ್ಜಿಸಿದನು ಕೃಷ್ಣ. ನಾರಾಯಣಪಿಳ್ಳೆಗೆ ಕೃಷ್ಣನ ಈ ಆರ್ಭಟ ಸಿಡಿಲು ಬಡಿದಂತೆ ತೋರಿತು. ಇದುತನಕ ತನ್ನ ತಂದೆಗೆ ಮರ್ಯಾದೆ ಮೀರಿ ಕೃಷ್ಣನು ಮಾತನಾಡಿದುದೇ ಇಲ್ಲ.

"ಏನಪ್ಪಾ ಸಂಗತಿ?" ಎಂದು ಮೆಲ್ಲಗೆ ಕೇಳಿದನು ಮುದುಕ.

"ಏನು? ನೀನೂ ನಾನೂ ನನ್ನ ಮಕ್ಕಳೂ ಕಲ್ಲನ್ನು ಕಟ್ಟಿಕೊಂಡು ಬಾವಿಯಲ್ಲಿ ಬಿದ್ದು ಸಾಯಬೇಕಷ್ಟೇ. ಆ ಚಮ್ಮಾರ ಹುಡುಗನು ಜಾತಿಯನ್ನು ಕೆಡಿಸಿಬಿಟ್ಟನು. ಮಹಾಪಾಪಿಷ್ಠ! ಎಲ್ಲಿಂದಲೋ ಶನಿಯಂತೆ ಬಂದು ಸೇರಿದ."

ಮುದುಕನಿಗೆ ದಿಕ್ಕುತೋಚದಂತಾಯಿತು; ಏನೊಂದೂ ಹೊಳೆಯಲಿಲ್ಲ.

"ಚಮ್ಮಾರ ಹುಡುಗನನ್ನು ಇಷ್ಟೊಂದು ವರ್ಷ ಮನೆಯಲ್ಲಿಟ್ಟುಕೊಂಡು ಊಟಹಾಕಿದ ಪಾಪವನ್ನು ಇನ್ನುಮೇಲೆ ಹೇಗೆ ಹೋಗಲಾಡಿಸಿಕೊಳ್ಳಲಿ!" ಎಂದು ತಲೆತಲೆ ಬಡಿದುಕೊಂಡು ಅತ್ತನು ಕೃಷ್ಣ.

ಮುದುಕನು ತನ್ನನ್ನೇ ತಾನು ಮರೆತನು. ಜ್ಞಾನತಪ್ಪಿ ಬೀಳುವ ಸ್ಥಿತಿಯಲ್ಲಿದ್ದನು. ಮನೆಯೊಳಗಿಂದ ಎಲ್ಲರೂ ಬಂದುಬಿಟ್ಟರು. ಮಾವ, ಮೈದುನ ಮೊದಲಾದ ಬಂಧುಬಳಗದವರು ಬಂದರು.

ಮುದುಕನು ಕಣ್ಣುಮುಚ್ಚಿಕೊಂಡನು. ಅವನ ಗಂಟಲು ಕಟ್ಟಿಕೊಂಡಿತು. ಯಾವ ಲೋಕದಲ್ಲಿ ಇದ್ದೇನೆಂಬ ನೆನಪನ್ನೇ ಅವನು ಮರೆತನು. ದೆವ್ವ ಬಡಿದಂತಹ ಮೂರ್ಛೆಯು ಅವನಿಗುಂಟಾಯಿತು.

೫

ಕೃಷ್ಣಪಿಳ್ಳೆ ಶ್ರೀಮಂತನಾಗಿಬಿಟ್ಟನು; ಆದುದರಿಂದ ಅವನು ದೇವರಿಗೆ ಪೂಜೆಪುರಸ್ಕಾರಮಾಡಿಯೂ ಇತರ ಕೆಲವು ಪ್ರಾಯಶ್ಚಿತ್ತಗಳನ್ನು ಮಾಡಿಯೂ

ಪುನಃ ಜಾತಿಯಲ್ಲಿ ಸೇರಿಕೊಂಡನು. ಅವನ ಮನಸ್ಸಿನಲ್ಲಿ ಅಸೂಯೆಯೆಂಬ ದೆವ್ವದ ಕೊನೆಯ ಅಭಿಲಾಷೆಯೊಂದಿದ್ದಿತು. ''ಈ ಪಾಪಿಷ್ಠನು ನಮ್ಮ ಮನೆಯಲ್ಲಿ ಕಲಿತ ಕಸಬಿನಿಂದ ಹಣ ಗಳಿಸುವನು. ಹಾಗೆ ಮಾಡಲು ಬಿಡಬಾರದು. ಇವನ ಕೈಯನ್ನು ಮುರಿದುಹಾಕಿಬಿಡಬೇಕು. ಇಲ್ಲವಾದರೆ ಈ ಕಸಬನ್ನೇ ಬಿಟ್ಟುಬಿಡುವಂತೆ ಮಾಡಬೇಕು'' ಎಂಬ ಚಿಂತೆ ಅವನಿಗುಂಟಾಯಿತು. ಅದಕ್ಕೆ ತಕ್ಕ ಹಂಚಿಕೆಯನ್ನು ಹುಡುಕತೊಡಗಿದನು.

ಪಾಪ! ಮುದುಕನು ಜೀವವಿಲ್ಲದ ಹೆಣವಾಗಿ ಬಿಟ್ಟನು. ತನ್ನ ಪಂಚಪ್ರಾಣವಾದ ಮುರುಗನನ್ನು ತೊರೆದನು. ಅವನು ಮಾಡಿದ್ದು ಮಹಾಪಾತಕವೆಂಬುದರಲ್ಲಿ ಮುದುಕನಿಗೆ ಸ್ವಲ್ಪವಾದರೂ ಸಂಶಯವಿಲ್ಲ. ಆ ವಿಷಯದಲ್ಲಿ ಅವನಿಗೆ ಎಂತಹ ದಂಡನೆಯನ್ನು ವಿಧಿಸಿದರೂ ಸಹ ವಿಧಿಸಬಹುದು. ಹೀಗೆ ಅವನ ಸಾಮಾಜಿಕ ಮನಸ್ಸು ಯೋಚಿಸಿತು. ಅವನಿಗೆ ಮತ್ತೊಂದು ಮನಸ್ಸು ಉಂಟು. ಅದು ಕಲಾವಿದನ ಮನಸ್ಸು. "ಅಯ್ಯೋ! ಎಂತಹ ಅದ್ಭುತವಾದ ಸಾಮರ್ಥ್ಯವುಳ್ಳವನು! ಅವನನ್ನು ಕಳೆದುಕೊಳ್ಳುವುದಕ್ಕೆ ಪ್ರತಿಯಾಗಿ ಈ ಲೋಕವನ್ನೇ ಕಳೆದುಕೊಳ್ಳಬಹುದಲ್ಲಾ! ನನ್ನ ವಿದ್ಯೆಗೆ—ಕೈಯ ಚತುರತೆಗೆ—ಅವನಲ್ಲವೇ ವಾರಸದಾರ? ಅವನಿಲ್ಲದೆ ನಾನು ಹೇಗೆ ಬಾಳಲಿ! ನಾನು ಯಾವುದಕ್ಕಾಗಿ ಜೀವಿಸಿರಬೇಕು? ನನ್ನ ಕಲ್ಪನೆ ಅವನ ಕೈಯಲ್ಲಲ್ಲವೇ ಆಕಾರ ಹೊಂದುವುದು! ಇನ್ನು ಮೇಲೆ ಅವನಂತೆ ಯಾರನ್ನು ಕಾಣುವೆನು!'' ಎಂಬ ಭಾವನೆ ಅವನ ಕಲಾವಿದ ಮನಸ್ಸಿನಲ್ಲಿ ಉಂಟಾಯಿತು. ಮುಂಚಿನ ಭಾವನೆಯಲ್ಲಿ ಜಾತಿಯೂ ಸಂಪ್ರದಾಯಗಳೂ ಅವನನ್ನು ಹೆದರಿಸಿದವು. ಎರಡನೆಯ ಭಾವನೆಯಲ್ಲಿ ನೈಜವಾದ ಪ್ರೇಮವೂ, ಕಲೆಯ ಹುಚ್ಚೂ ಅವನನ್ನು ಶೋಕಸಮುದ್ರದಲ್ಲಿ ಅದುಮಿದುವು.

ಕೃಷ್ಣನು ತನಗೆ ಬೇಕಾದ ಚಮ್ಮಾರನೊಬ್ಬನ ಜೊತೆಯಲ್ಲಿ ಕೇರಿಯೊಳಗೆ ನುಗ್ಗಿದನು. ಮುರುಗನು ಇದ್ದ ಗುಡಿಸಲಿನ ಸಮೀಪಕ್ಕೆ ಹೋಗಿ ದೂರದಲ್ಲಿ ನಿಂತನು. ಜೊತೆಯಲ್ಲಿ ಬಂದವನು ಮುರುಗನನ್ನು ಕರೆತಂದನು. ಅವನು ಹೊರಗೆ ಬಂದೊಡನೆ ಕೃಷ್ಣನನ್ನು ಕಂಡು ಬೆಚ್ಚಿಬಿದ್ದನು; "ಅಣ್ಣಯ್ಯಾ! ಅಪ್ಪನು ಸೌಖ್ಯವೇ?'' ಎಂದು ಕೇಳಿದನು.

"ಛೀ! ಕತ್ತೆ! ಎಲ್ಲಿಯ ಅಣ್ಣ? ಎಲ್ಲಿಯ ಅಪ್ಪ? ಚಮ್ಮಾರ ನಾಯಿಗೆ ಎಂತಹ ಕೊಬ್ಬು! ನನ್ನನ್ನು ಇನ್ನು ಮೇಲೆ ಹಾಗೆ ಕರೆಯಬೇಡ!'' ಎಂದು ಕೃಷ್ಣನು ಅಬ್ಬರಿಸಿದನು.

ತನ್ನನ್ನು ಪ್ರಾಣಹೋಗುವಂತೆ ಸದೆಬಡಿದ ಮಾತ್ರಕ್ಕೇ ಕೃಷ್ಣನ ಕೋಪವು ಶಮನವಾಗಲಿಲ್ಲವೆಂಬುದನ್ನು ಆ ಮಾತಿನಿಂದ ಮುರುಗ ಅರಿತು ಕೊಂಡನು. ''ಅಣ್ಣಯ್ಯಾ'' ಎಂದು ಕರೆಯದೆ ಮತ್ತೆ ಹೇಗೆ ಕರೆಯುವು ದೆಂದು ಅವನ ಮನಸ್ಸಿಗೆ ಹೊಳೆಯಲಿಲ್ಲ.

''ನಿಮ್ಮ ತಂದೆಯವರು ಸೌಖ್ಯವಾಗಿರುವರೆ?" ಎಂದು ಮರ್ಯಾ ದೆಯ ಭಾಷೆಯಲ್ಲಿ ಕೇಳಿದನು. ಕೇಳುವಾಗ ದುಃಖವು ಗಂಟಲನ್ನು ಕಟ್ಟಿಕೊಂಡಿತು.

''ನಾಯಿಯೆ? ಅದೆಲ್ಲವೂ ನಿನಗೇಕೆ? ಸಾಕು ಮಾಡು ಕ್ಷೇಮ ಸಮಾಚಾರವನ್ನು! ನಿನಗೊಂದು ಮಾತು ಹೇಳಲು ಬಂದೆನು ಕೇಳು.''

''ಹೇಳಿ'' ಎಂದನು ನಡುಗುತ್ತಾ ಮುರುಗ.

''ನಮ್ಮಪ್ಪನ ಮೇಲೆ ಆಣೆ. ಇನ್ನು ಮೇಲೆ ನೀನು ಮಣ್ಣಿನ ಗೊಂಬೆ ಗಳನ್ನು ಮಾಡಕೂಡದು. ಮಾಡಿದರೆ ನಿನ್ನ ಕೈಯನ್ನು ಮುರಿದು ತಕ್ಕ ದಂಡನೆಯನ್ನು ವಿಧಿಸುವೆನು ನಮ್ಮ ಮನೆಯ ಆಸ್ತಿ ಅದು. ಅದು ನಿನಗೆ ಲಭ್ಯವಿಲ್ಲ. ನೀನು ಗೊಂಬೆಮಾಡಿ ಹಣ ಗಳಿಸಬಾರದು. ತಿಳಿಯಿತೇ?'' ಎಂದು ಅಧಿಕಾರವಾಣಿಯಿಂದ ಕೃಷ್ಣನು ನುಡಿದನು.

ಮುರುಗನು ಮರ್ಯಾದೆಗೆ ಹೆದರಿದವನು. ಅಪ್ರಬುದ್ಧನಾದ ಆ ಹುಡುಗ ತನ್ನ ಜಾತಿಯನ್ನು ಮರೆಸಿ ಅವರ ಮನೆಯನ್ನು ಸೇರಿಕೊಂಡನು. ಅವನು ಮತ್ತಾವ ಅಪರಾಧವನ್ನೂ ಮಾಡಿಲ್ಲ. ತಾನು ಅನುಭವಿಸಿದ ಹೊಡೆತವೆಲ್ಲವೂ ತಾನು ಮಾಡಿದ ಅಪರಾಧಕ್ಕೆ ಸಾಕಷ್ಟು ದಂಡನೆ ಎಂಬುದೇ ಅವನ ತೀರ್ಮಾನ. ಆದರೂ ಆ ಮುದುಕನನ್ನು—"ಅಪ್ಪನನ್ನು''—ಅವನು ಹೇಗೆ ಅಗಲಿರಬಲ್ಲನು? ಇದು ಮಾತ್ರವೇ ದೊಡ್ಡ ವಿಷಯ. ಮುದುಕನಿಗೆ ಹೇಗೆ ಮುರುಗನನ್ನು ಅಗಲಿರಲು ಸಾಧ್ಯವಾಗಲಿಲ್ಲವೋ ಹಾಗೆಯೇ ಮುರುಗ ನಿಗೂ ತನ್ನ ''ಅಪ್ಪನನ್ನು'' ಅಗಲಿರಲಾಗಲಿಲ್ಲ. ದೈವವೂ, ಗುರುವೂ,

ತಂದೆಯೂ, ತಾಯಿಯೂ, ಸಕಲವೂ ಆ ಮುದುಕನೇ ಎಂದು ಅವನು ನಂಬಿದ್ದನು. ಈಗಲಾದರೋ ಮುದುಕನು ಉತ್ತಮ ಜಾತಿಯವನು; ತಾನು ನೀಚ ಜಾತಿಯವನು. ಇನ್ನು ಮೇಲೆ ಹೇಗೆ ಅಪ್ಪನನ್ನು ಬಿಟ್ಟು ಬಾಳುವುದು ?

ಹೊತ್ತು ಹೋಗಬೇಕಲ್ಲಾ, ಅದಕ್ಕಾಗಿ ತನ್ನ ಸ್ವಂತ ತಂದೆಯ ಮೂಲಕ ಬಣ್ಣ ಕೊಂಡುತರಹೇಳಿ ಕೆಲವು ಗೊಂಬೆಗಳನ್ನು ಮಾಡಿದನು. ಅವುಗಳನ್ನು ಮಾಡಿದಾಗಲೆಲ್ಲಾ ತನ್ನ ಕಲಾಕೌಶಲ್ಯವನ್ನೂ ಆ ಗೊಂಬೆಗಳ ಸೌಂದರ್ಯವನ್ನೂ ನೋಡಿ ಅಚ್ಚರಿಗೊಂಡು ಹೊಗಳುತ್ತಾ ಪ್ರೀತಿ ವಾತ್ಸಲ್ಯ ದೊಡನೆ ಮೈದಡವುತ್ತಲಿದ್ದ ಮುದುಕನನ್ನು ನೆನೆದು ಮರುಗುವನು; "ಅಯ್ಯೋ! ಆ ಬದುಕೊಂದು ಸ್ವಪ್ನದಂತಾಯಿತೆ? ದೈವವೇ!" ಎಂದು ಏಕಾಂತದಲ್ಲಿ ಬಹಳವಾಗಿ ಗೋಳಾಡುವನು.

ಅವನ ಸ್ವಂತ ತಂದೆಯು ಅವನಿಗೆ ಚಪ್ಪಲಿ ಹೊಲಿಯಲು ಕಲಿಸಿದನು. ಅದನ್ನೂ ಮುರುಗ ಸುಲಭವಾಗಿ ಕಲಿತುಕೊಂಡನು. ಈ ಹೊಸ ಕಸಬನ್ನು ಅವನು ಕೌಶಲ್ಯದಿಂದ ಸಾಗಿಸಿದನು.

ಗೊಂಬೆ ಮಾಡುವನು; ಬಹಳ ಶ್ರಮಪಟ್ಟು ಮಾಡುವನು. ಅವನ ತಂದೆಯು ಅವನ್ನು ಮಾರೋಣವೆಂದು ಹೇಳುವನು. ಮುರುಗನಿಗೆ ಮಾರಲು ಮನಸ್ಸು ಬಾರದು. "ನಮ್ಮ "ಅಪ್ಪನಿಗೆ" ತೋರಿಸಿದ ಗೊಂಬೆ ಮನುಷ್ಯರ ಕೈಯನ್ನು ಸೇರಬಾರದು" ಎಂದು ಹೇಳುವನು.

"ಹಾಗಾದರೆ ನೀನು ಯಾವುದಕ್ಕಾಗಿ ದುಡ್ಡನ್ನು ಖರ್ಚು ಮಾಡಿ ಬಣ್ಣ ಕೊಂಡುತಂದು ಇವೆಲ್ಲವನ್ನೂ ಮಾಡುತ್ತೀಯೆ? ಆ ಹೊತ್ತಿನಲ್ಲಿ ನಾಲ್ಕು ಚಪ್ಪಲಿ ಹೊಲಿದರಾದರೂ ಲಾಭ ಸಿಗುವುದಲ್ಲಾ" ಎಂದು ಹೇಳುವನು ಹೆತ್ತ ತಂದೆ."

"ಅದರಲ್ಲಿ ನನಗೆ ಹೊತ್ತು ಹೋಗುತ್ತದೆ, ಆನಂದ ಉಂಟಾಗುತ್ತದೆ" ಎಂದು ಹೇಳಿ ಗಳಗಳನೆ ಕಣ್ಣೀರು ಸುರಿಸುವನು ಮುರುಗ.

ತಂದೆಗೆ ಅವನ ಕಲೆಯ ಹುಚ್ಚು ಅರ್ಥವಾಗಲಿಲ್ಲ.

ಈ ರೀತಿಯಲ್ಲಿ ಹೊತ್ತು ಹೋಗುವುದಕ್ಕಾಗಿಯೂ ಸಮಾಧಾನಕ್ಕಾಗಿಯೂ ಮಾಡಿ ಬಂದ ಕಲೆಯ ಆಟದ ಬಾಯಲ್ಲಿ ಸಹಾ ಮಣ್ಣು ಬೀಳುವ ಸಮಯ ಒದಗಿತು. ಕೃಷ್ಣನು ಆಣೆಯಿಟ್ಟು ತಡೆಯುತ್ತಾನೆ.

"ಅಣ್ಣಯ್ಯಾ, ಏನು ಬೇಕಾದರೂ ಮಾಡಿ, ಒಪ್ಪಿಕೊಳ್ಳುತ್ತೇನೆ. ಈ ದಂಡನೆ ಮಾತ್ರ ಬೇಡ. ನಾನು ವ್ಯಾಪಾರಕ್ಕಾಗಿ ಗೊಂಬೆಗಳನ್ನು ಮಾಡುವುದೇ ಇಲ್ಲ. ಏನೋ ಹೊತ್ತು ಕಳೆಯುವುದಕ್ಕಾಗಿ ಮಾಡುತ್ತೇನೆ."

"ಛೀ ತಿರುಕಾ! ಪುನಃ ಅಣ್ಣನ ನೆಂಟಸ್ತಿಕೆಯೋ? ಹೊತ್ತು ಹೋಗಲು ಗೊಂಬೆ ಮಾಡಬೇಕೆ? ಚಪ್ಪಲಿ ಹೊಲಿದರಾಯಿತು."

"ಅದನ್ನೂ ಮಾಡುತ್ತೇನೆ. ಆದರೂ ಕೂಡ ಗೊಂಬೆ ಮಾಡದಿದ್ದಲ್ಲಿ ನನಗೆ ಹುಚ್ಚು ಹಿಡಿಯುವುದೇ ಸರಿ."

"ಹುಚ್ಚು ಹಿಡಿಸಿಕೊಂಡು ಹೊಡೆಯಿಸಿಕೊಂಡು ಒದೆಯಿಸಿಕೊಂಡು ಅಲೆದಾಡು! ಹಾಗೆ ಅಲೆದಾಡಿದರೂ ಕೂಡ ನಿನ್ನ ಪಾತಕಕ್ಕೆ ದಂಡನೆ ಸಾಲದು."

"ನಾನು ಗೊಂಬೆ ಮಾಡುವುದರಿಂದ ನಿಮಗೇನು ಅಡ್ಡಿ? ಅದರಿಂದ ನಿಮಗೆ ನಷ್ಟವಿಲ್ಲವಲ್ಲಾ. ನಾನು ಮಾಡುವ ಗೊಂಬೆಗಳನ್ನು ಮಾರಿಬಿಡುವೆನೆಂಬ ಭೀತಿ ನಿಮಗೆ ಇರುವುದಾದರೆ ಅವನ್ನು ನೀವೇ ತೆಗೆದುಕೊಂಡು ಹೋಗಿಬಿಡಿ."

ಮುರುಗ ಈ ಮಾತನ್ನು ಮನಃಪೂರ್ವಕವಾಗಿ ಹೇಳಿದನು. ಹೇಗಾದರೂ ತನ್ನ ಮುದ್ದು "ಅಪ್ಪನ" ಕಣ್ಣಿಗೆ ಆ ಗೊಂಬೆಗಳು ಬೀಳಲಿ ಎಂಬುದೇ ಅವನ ಇಚ್ಛೆ.

ಕೃಷ್ಣನು ಹಲ್ಲುಕಡಿದನು; "ಎಂತಹ ಕೊಬ್ಬು ನೋಡು ಈ ನೀಚ ತಿರುಕನಿಗೆ!" ಎಂದು ಅಂದುಕೊಂಡನು. "ನಿನ್ನ ಗೊಂಬೆಗಳನ್ನು-ಇಂದಿನ ತನಕ ಮಾಡಿದವುಗಳನ್ನು—ತೆಗೆದು ಹೊರಗಿಡು. ಇಷ್ಟರ ಮೇಲೆ ನೀನು ಮಾಡುವ ಗೊಂಬೆಗಳೆಲ್ಲವನ್ನೂ ನನಗೆ ಕೊಟ್ಟು ಬಿಡಬೇಕು. ಹಾಗೆ ಮಾಡುವುದಾಗಿ ಆಣೆ ಮಾಡು" ಎಂದು ಕಿಡಿಕಿಡಿಯಾಗಿ ಹೇಳಿದನು.

"ನಮ್ಮಪ್ಪನ ಆಣೆ, ನಾನು ಮಾಡುವ ಗೊಂಬೆಗಳನ್ನು ನಿಮ್ಮ ಹತ್ತಿರದಲ್ಲೇ ಕೊಟ್ಟು ಬಿಡುತ್ತೇನೆ" ಎಂದು ಅಳುತ್ತಾ ಆಣೆ ಮಾಡಿದನು ಮುರುಗ. ಗಲ್ಲಿಗೇರಿಸುವ ಸ್ಥಳದಲ್ಲಿ ಅಪರಾಧಿಯು ತನ್ನ ಜೀವನದ ನಂಬಿಕೆಯೆಲ್ಲವನ್ನೂ ತೊರೆದು ನಿಲ್ಲುವ ಹಾಗೆ ಅವನು ನಿಂತನು.

"ಸರಿ, ಒಳಗಡೆ ಇರುವುದನ್ನು ಹೊರಗೆ ತೆಗೆದಿಡು" ಎಂದು ಅಪ್ಪಣೆಯಾಯಿತು.

ಆ ಬಡ ಚಮ್ಮಾರ ಹುಡುಗನು ತನ್ನ ಹೃದಯದಿಂದ ಹೊರಟ ಭಾವನೆಗಳನ್ನೂ ಬಣ್ಣಗಳನ್ನೂ ಬೆರೆಯಿಸಿ ಸೃಷ್ಟಿಸಿದ ಆ ಸುಂದರವಾದ ಗೊಂಬೆಗಳನ್ನು ಕಣ್ಣೀರು ಸುರಿಸುತ್ತಾ ತೆಗೆದು ಹೊರಗಿಟ್ಟನು.

"ಜೋಕೆ, ಕೊಟ್ಟ ಮಾತನ್ನು ಪಾಲಿಸುವುದರಲ್ಲಾದರೂ ನೀನು ಯೋಗ್ಯನಾಗಿ ಇರು. ಇಲ್ಲದಿದ್ದರೆ ನೀನು ನಾಶವಾಗಿ ಬಿಡುವೆ" ಎಂದು ಎಚ್ಚರಿಸಿ ಕೃಷ್ಣನು ಆ ಗೊಂಬೆಗಳನ್ನು ತನ್ನೊಡನೆ ಬಂದಿದ್ದ ಆಳಿನ ಕೈಯಲ್ಲಿ ತೆಗೆಸಿಕೊಂಡು ಹೊರಟನು.

ಮುರುಗ ತನ್ನ ಹೃದಯವನ್ನೇ ಬಲಿ ಕೊಟ್ಟುಬಿಟ್ಟ ಹಾಗೆ ಗುಡಿಸಲಿನೊಳಕ್ಕೆ ಹೋಗಿ ಬಿದ್ದುಬಿಟ್ಟನು. ಆದರೆ ಅವನು ತನ್ನ ಧೈರ್ಯವನ್ನೆಲ್ಲಾ ಕಳೆದುಕೊಳ್ಳಲಿಲ್ಲ. ತನ್ನ "ಅಪ್ಪನು" ಅವನ್ನು ನೋಡಿದ ಕೂಡಲೇ ಅವನ ಮನಸ್ಸು ತನ್ನ ಸಲುವಾಗಿ ಕರಗುವದೆಂದು ತಿಳಿದನು; ಅವನಲ್ಲಿ ಆಶೆ ಹುಟ್ಟಿತು. "ನಾನು ಮಾಡುವ ಗೊಂಬೆಗಳೆಲ್ಲವನ್ನೂ ತೆಗೆದುಕೊಂಡು ಹೋಗಲಿ. ಅದರಿಂದ ನನಗೇನು ನಷ್ಟ? ನಾನಾದರೋ ವ್ಯಾಪಾರ ಮಾಡುವುದಿಲ್ಲ. ಅವರಿಗೆ ಹಣ ಬರಲಿ. ನಾನು ಮಾಡಿದ ತಪ್ಪಿತಕ್ಕೆ ಕಾಣಿಕೆ ಸಲ್ಲಿಸಿದಂತಾಗುವುದು. ಅಪ್ಪನು ಸಂತೋಷಪಡುವುದೊಂದೇ ನನಗೆ ಬೇಕು." ಎಂದೆಲ್ಲಾ ಅವನ ಯೋಚನೆ ವಿಕಾಸಗೊಂಡು ಹರಡಿತು. ಆದುದರಿಂದ ಪುನಃ ಅವನು ಗೊಂಬೆ ಮಾಡುವುದರಲ್ಲಿ ಹುರುಪುಗೊಂಡನು.

ಎಲಾ ಪಾಪಿಷ್ಠ! ಅಸೂಯೆಯೆಂಬ ದೆವ್ವವೇ! ಹೀಗೂ ಮಾಡಬೇಕೆ? ಕೃಷ್ಣನು ಅಸೂಯೆಯ ಅವತಾರ ಪುರುಷ—ತಾನು ತೆಗೆದುಕೊಂಡು ಹೋಗುವ ಗೊಂಬೆಗಳನ್ನು ದಾರಿಯಲ್ಲೇ ಒಂದು ಬಂಡೆಯ ಮೇಲೆ ಎಸೆದು

ಒಡೆದು ಬಿಟ್ಟನು. ತನ್ನ ಕೈಗಳನ್ನು ಮೇಲಕ್ಕೆತ್ತಿ ಹಲ್ಲನ್ನು ಕಡಿಯುತ್ತಾ ಅವನ್ನು ಬಂಡೆಯ ಮೇಲೆ ಎಸೆದು ಒಡೆದಾಗ ಮುಯ್ಯಿಗೆ ಮುಯ್ಯಿ ತೀರಿಸಿ ಕೊಂಡವನಂತೆ ತೃಪ್ತಿಯೊಂದು ಅವನ ಹೃದಯದಲ್ಲಿ ಜನಿಸಿತು.

ಈ ರೀತಿ ಅವನು ವಾರಕ್ಕೊಂದಾವರ್ತಿ ಮಾಡುತ್ತಿದ್ದನು. ಒಬ್ಬ ಆಳನ್ನು ಕರೆದುಕೊಂಡು ಹೋಗುವುದು, ಅವನನ್ನು ಒಳಗಡೆ ಹೋಗಿ ಗೊಂಬೆ ಗಳನ್ನು ತರಹೇಳುವುದು, ಹೋಗುವ ದಾರಿಯಲ್ಲಿ ಅವನ್ನು ಒಡೆದು ಬಿಡುವುದು !

ಮುರುಗನು ತನ್ನ ಕಲಾಕೌಶಲ್ಯದಿಂದ ಸೃಷ್ಟಿಸಿದ ಸೃಷ್ಟಿಗಳೆಲ್ಲವೂ ಅಸೂಯೆಯೆಂಬ ಪಿಶಾಚಿಗೆ ಬಲಿಯಾಗುವುದನ್ನು ಅರಿತವನೇ ಅಲ್ಲ. ಅರಿ ತಲ್ಲಿ ಎಷ್ಟೊಂದು ವ್ಯಥೆಪಡುವನು !

ಅಪ್ಪನನ್ನು ಕಾಣದೆ ಅವನ ಕಣ್ಣುಗಳು ಮಂಕು ಮಂಕಾದವು. ಅವನ ಧ್ವನಿಯನ್ನು ಕೇಳದೆ ಕಿವಿ ಕೂಡಾ ಕಿವುಡಾಯಿತು. ಒಬ್ಬರೂ ತಿಳಿ ಯದ ಹಾಗೆ ಸಂಜೆಯಲ್ಲಿ ಮಸುಕು ಮಸುಕಾದ ವೇಳೆಯಲ್ಲಿ ಅವರ ಮನೆಯ ಕಡೆಗೆ ಹೋಗುವನು. ಕೆಲ ದಿನ ವೃದ್ಧನು ಜಗುಲಿಯಲ್ಲಿ ಕುಳಿತಿರುವನು ; ಕೆಲ ದಿನ ಅಲ್ಲಿರುತ್ತಿರಲಿಲ್ಲ. ಇದ್ದಲ್ಲಿ ದೇವರ ದರ್ಶನವಾದಂತೆ ಮುರುಗನು ಸಂತುಷ್ಟಿ ಹೊಂದಿದವನಾಗಿ ಹಿಂತಿರುಗುವನು. ಅವನನ್ನು ಕಾಣದಿದ್ದರೂ ಅವನು ಕೆಮ್ಮುವ ಶಬ್ದವನ್ನಾದರೂ ಕೇಳಲು ಕಾದಿರುವನು. ಅದೂ ಲಭ್ಯವಿಲ್ಲದೇ ಹೋದಲ್ಲಿ ಬಳಲಿ ಹೋಗಿ ತನ್ನ ವಿಧಿಯನ್ನು ನಿಂದಿಸುತ್ತಾ ಹೊರಟು ಹೋಗುವನು.

ಮುರುಗನ ಜೊತೆಯಲ್ಲಿ ಹೊರಟು ಹೋದ ಜೀವವು ಮರಳಿ ವೃದ್ಧ ನಿಗೆ ಬರಲೇ ಇಲ್ಲ. ಆ ಚಿಂತೆಯೇ ,ಅವನಿಗೆ ಶೀಘ್ರದಲ್ಲಿ ಯಮಧರ್ಮ ರಾಜನ ಸೇವೆಯು ಲಭ್ಯವಾಗುವಂತೆ ಮಾಡಿತು. ಕೆಲವು ತಿಂಗಳಲ್ಲಿಯೇ ವೃದ್ಧನು ಮರಣ ಹೊಂದಿದನು. ಸಾಯುವಾಗ ಸಹಾ ಅವನು ಮುರುಗ ನನ್ನೇ ಸ್ಮರಿಸುತ್ತಲಿದ್ದನು. ಮೃತ್ಯುಶಯ್ಯೆಯಲ್ಲಿ ಅವನು ಕನವರಿಸಿದ ಕೊನೆಯ ಮಾತು "ಮುರುಗಾ" ಎಂಬುದೇ.

ವೃದ್ಧನು ಲೋಕವನ್ನು ತೊರೆದ ಸಂಗತಿಯು ಮುರುಗನಿಗೆ ತಿಳಿಯಿತು. ಇನ್ನುಮೇಲೆ ಮರೆಯಲ್ಲಿ ನಿಂತು ಕೂಡ "ಅಪ್ಪ" ನನ್ನು ನೋಡಲು ಸಾಧ್ಯವಿಲ್ಲ

ವಲ್ಲಾ ಎಂದು ಅವನು ಬಹಳವಾಗಿ ಪರಿತಪಿಸಿದನು. ತಾಯಿಯನ್ನು ತೊರೆದ ಮಗುವಿನಂತೆ ಅವನಿಗೆ ಸಹಿಸಲಸಾಧ್ಯವಾದ ಚಿಂತೆ ಹೆಚ್ಚಿತು. ಇನ್ನು ಮೇಲೆ ಆ ಪ್ರತ್ಯಕ್ಷ ದೇವರನ್ನು ಕಾಣಲು ದಾರಿಯೇ ಇಲ್ಲವೆಂದು ಬಿಕ್ಕಿ ಬಿಕ್ಕಿ ಅತ್ತನು.

೬

ನಮಗೂ ಕಲಾವಿದನಿಗೂ ಅದೊಂದೇ ವ್ಯತ್ಯಾಸ. ಅವನ ಅಪ್ಪನು ಲೋಕದಿಂದ ಮರೆಯಾದನೆಂಬುದು ಸತ್ಯ. ಆದರೂ ಅವನ ಹೃದಯ ಕಮಲದಲ್ಲಿ ಆ ವೃದ್ಧಮೂರ್ತಿಯು ನೆಲೆಯಾಗಿ ನಿಂತಿತು. ತನ್ನ ಹೃದಯ ದಲ್ಲಿದ್ದ ಆ ಮೂರ್ತಿಯನ್ನು ಏಕೆ ಹೊರಪ್ರಪಂಚದಲ್ಲಿ ತನ್ನ ಕೈಯ ಸಾಮರ್ಥ್ಯ ದಿಂದ ಸೃಷ್ಟಿಸಬಾರದು? ಈ ಯೋಚನೆಯು ಹೊಳೆಯಿತೋ ಇಲ್ಲವೋ ಅವನಿಗೆ ಪಾದಾದಿ ಕೇಶದವರೆವಿಗೂ ಅಮೃತವರ್ಷವೊಂದು ಹರಿಯಿತು. ತಕ್ಷಣ ರೋಮಾಂಚವುಂಟಾಯಿತು, ಮುಖದಲ್ಲಿ ಪ್ರಕಾಶವುದಿಸಿತು; ''ಇದು ನನ್ನ ಕರ್ತವ್ಯ; ನನ್ನ ಜೀವಮಾನ ಪರ್ಯಂತ ದುಡಿಯಬೇಕಾ ದರೂ ದುಡಿದು ನನ್ನ ''ಅಪ್ಪನನ್ನು'' ನನ್ನ ಕಣ್ಣಿನ ಮುಂದೆ ನಿಲ್ಲಿಸುವೆನು. ನನ್ನ 'ಅಣ್ಣನಿಗೆ' ಇನ್ನು ಮೇಲೆ 'ಅಪ್ಪ'ನಿಲ್ಲ; ನನಗಿದ್ದಾನೆ. ಅವನ ರೂಪವು ನನ್ನ ಹೃದಯದಲ್ಲಿ ಹೊಚ್ಚ ಹೊಸದಾಗಿರುವಾಗಲೇ ನಾನು ಮೂರ್ತಿಯನ್ನು ಮಾಡಿಬಿಡುವೆನು. ಅದನ್ನು ನಾನೇ ಇರಿಸಿಕೊಳ್ಳುವೆನು. ಕೊಡುವುದೇ ಇಲ್ಲ.'' —ಅವನ ಹೃದಯಾಂತರಾಳದಲ್ಲಿ ಈ ರೀತಿಯಾಗಿ ಒಂದರ ಮೇಲೊಂದು ಅಲೆಗಳೆದ್ದುವು. 'ಅಯ್ಯೋ ಅವನು ಕೊಂಡೊಯ್ದುಬಿಟ್ಟರೆ?' —ಅದೊಂದು ದೊಡ್ಡ ತೊಡಕು. 'ನಂತರ ನೋಡಿಕೊಳ್ಳೋಣ, ಈಗ ಮಾಡಲು ಪ್ರಾರಂಭಿಸೋಣ.' —ಈ ರೀತಿಯ ಒಂದು ಹುಚ್ಚು ಸಮಾಧಾನ.

ಅಂದು ರಾತ್ರಿಯಲ್ಲಾ ಅವನು ನಿದ್ರೆಮಾಡಲಿಲ್ಲ. ತನ್ನ ''ಅಪ್ಪನ'' ವ್ಯಕ್ತಿಯನ್ನು ನೆನೆದು ನೆನೆದು ನೋಡಿದನು. ಅಂದು ಕನಸಿನಲ್ಲಿ ಸಹಾ ಕಂಡನು. ಮಾರನೆಯ ದಿನ ಪ್ರಾರಂಭಿಸಿಬಿಟ್ಟನು. ಯಾಗವಂತೆ, ಯಜ್ಞ ವಂತೆ, ಪೂಜೆಯಂತೆ, ಪುರಸ್ಕಾರವಂತೆ; ಇವುಗಳಲ್ಲಿ ಶ್ರದ್ಧೆ ಬೇಕಂತೆ. ಮುರುಗನು ಮಾಡತೊಡಗಿದ ಕೆಲಸದಲ್ಲಿ ಅದಕ್ಕಿಂತಲೂ ಸಾವಿರ ಪಾಲು ಶ್ರದ್ಧೆ ಅವನಿಗಿದ್ದಿತು.

ಒಂದೊಂದು ರವೆಯಷ್ಟು ಮಣ್ಣನ್ನೂ ನಿಧಾನವಾಗಿ ಆಲೋಚನಾ ಪರನಾಗಿ ಅವನು ಕೈಯಲ್ಲಿ ತೆಗೆದುಕೊಂಡು ಎಷ್ಟೋ ಬಾರಿ ಪುನಃ ಪುನಃ ಅಳಿಸಿ ಅಳಿಸಿ ಮಾಡಿದನು. ಆ ಮೂರ್ತಿಯನ್ನು ನಾಲ್ಕು ದಿವಸಗಳಲ್ಲಿ ಮಣ್ಣಿನಿಂದ ಮಾಡಿ ಮುಗಿಸಿಬಿಟ್ಟನು. ಬಣ್ಣ ಹಾಕಲು ತೊಡಗಿದನು. ತಾನು ಚಪ್ಪಲಿ ಹೊಲಿದ ಹಣದ ಜೊತೆಯಲ್ಲಿ ತಂದೆಯನ್ನು ಅಂಗಲಾಚಿ ಬೇಡಿ ತೆಗೆದುಕೊಂಡ ಹಣವನ್ನೂ ಸೇರಿಸಿ ಉತ್ತಮವಾದ ಬಣ್ಣವನ್ನು ಕೊಂಡುಕೊಂಡನು. ಕ್ರಮವಾಗಿ ಬಣ್ಣ ಹಾಕಲು ಪ್ರಾರಂಭಿಸಿದನು.

ಮುಗಿದು ಹೋಯಿತು. ಕಣ್ಣನ್ನರಳಿಸಿ, ಚೆನ್ನಾಗಿ ಅರಳಿಸಿ, ನೋಡಿದನು. "ಆಹಾ ಎಲ್ಲವೂ "ಅಪ್ಪನ" ಅನುಗ್ರಹ!" ಎಂದು ಕಿರಿಚಿದನು. ಆನಂದಸಾಗರದಲ್ಲಿ ಮುಳುಗಿದನು; "ನಾನು ಗೆದ್ದೆನು. ನಮ್ಮ ಅಪ್ಪನನ್ನು ನನ್ನ ಅಪ್ಪನಾಗಿ ಮಾಡಿಕೊಂಡೆ, ಶಹಭಾಸ್! ಒಳ್ಳೆಯ ಕೈವಾಡ" ಹುಚ್ಚು ಹಿಡಿದವನಂತೆ ಅವನು ಹಲವು ತರಹದ ಮಾತುಗಳನ್ನು ಕನವರಿಸಿದನು.

ಆ ಮೂರ್ತಿಯು, ಆ ವೃದ್ಧನೇ ಸಜೀವವಾಗಿ ಬಂದು ನಿಂತಿರುವಂತಿತ್ತು. ಮುಖದ ಮಾಟ, ತೆಳ್ಳನೆಯ ದೇಹ, ಬತ್ತಿಹೋದ ಕೆನ್ನೆ, ಹಣೆಯ ಗೀಟು, ಎಲ್ಲವೂ ಅದೇ ಎರಕ; ಬಣ್ಣ, ಸಾಕ್ಷಾತ್ ಅವನ ಮೈಬಣ್ಣವೇ.

ಆನಂದೋತ್ಸಾಹದಲ್ಲಿ ಉಬ್ಬಿ ಮೇಲೇರಿದ್ದ ಮುರುಗನು ಹಠಾತ್ತಾಗಿ ಪಾತಾಳದಲ್ಲಿ ಬಿದ್ದನು; "ಅಯ್ಯೋ, ಅಣ್ಣನು ಬಯ್ದರೆ—?" ಎಂದು ಹಂಬಲಿಸಿದನು. ದೇವಕಿಯು ಕೃಷ್ಣನು ಜನಿಸಿದ ತಕ್ಷಣ ಅವನ ದಿವ್ಯ ರೂಪ ಲಾವಣ್ಯದಲ್ಲಿ ತಲ್ಲೀನಳಾಗಿ ಸಂತೋಷ ಸಾಗರದಲ್ಲಿ ಮುಳುಗಿದ್ದಳಂತೆ. ಕಂಸನು ಬಂದು ಮಗುವನ್ನು ಕೊಂದುಬಿಡುವನಲ್ಲಾ ಎಂಬ ಭೀತಿಯು ಅಕಸ್ಮಾತ್ತಾಗಿ ಹುಟ್ಟಿತಂತೆ; ಅವಳು ತಟ್ಟನೆ ಕಿರಿಚಿಕೊಂಡಳಂತೆ. ಅವಳ ಸ್ಥಿತಿಯಲ್ಲಿದ್ದನು ಮುರುಗ.

ಯಾವುದಾದರೊಂದು ಉಪಾಯ ಮಾಡಬೇಕಷ್ಟೆ. "ಇದನ್ನು ಎಲ್ಲಿಯಾದರೂ ಮರೆಸಿ ಮಡಗಿಬಿಡುತ್ತೇನೆ. ಹೆಸರಿಗೆ ಬೇರೆ ಎರಡು ಬೊಂಬೆಗಳನ್ನು ಮಾಡಿ ಇಡುತ್ತೇನೆ. ಅವುಗಳನ್ನು ಅಣ್ಣನಿಗೆ ಕೊಟ್ಟರಾಯಿತು."

ಎಂದು ನಿರ್ಧರಿಸಿ ಆ ಸುಂದರವಾದ ಮೂರ್ತಿಯನ್ನು ಕಾಗದದಲ್ಲಿ ಸುತ್ತಿ ಒಂದು ಮೂಲೆಯಲ್ಲಿ ಮಡಗಿಬಿಟ್ಟನು.

ಭಾನುವಾರ; ಎಂದಿನಂತೆ ಕೃಷ್ಣನು ಚಮ್ಮಾರ ಆಳೊಬ್ಬನೊಡನೆ ಬಂದು ನಿಂತನು. "ಅಯ್ಯೋ!" ಎಂದು ಮುರುಗನ ದೇಹವು ನಡುಗಿತು. ಆಳು ಒಳಗೆ ಹೋಗಿ ಎರಡು ಗೊಂಬೆಗಳನ್ನು ಹೊರಗೆ ತಂದನು.

"ಲೋ, ಇಷ್ಟೇನೆ? ಇವು ಅವಸರದಲ್ಲಿ ಮಾಡಿದ ಹಾಗಿವೆ!" ಎಂದನು ಕೃಷ್ಣ ಪಿಳ್ಳೆ.

"ಹೌದು; ಚಪ್ಪಲಿ ಹೊಲಿಯುವ ಕೆಲಸ ಬಹಳವಾಗಿ ಬಿಟ್ಟಿದೆ." ಎಂದ ಮುರುಗ.

"ಈ ಕೆಲಸವನ್ನು ಬಿಟ್ಟುಬಿಡುವಿಯೇನು?"

"ಯೋಚಿಸಿ ನೋಡುತ್ತೇನೆ."

ಮುರುಗ ಸರಿಯಾದ ಜ್ಞಾನದಿಂದ ಉತ್ತರ ಕೊಡಲಿಲ್ಲ. ಅವನ ಹೃದಯವು ದಡದಡನೆ ಬಡಿಯುತ್ತಲೇ ಇದ್ದಿತು. ಹೇಗೆ ಹೇಗೋ ನೋಡುತ್ತಾ ನಡುಗುತ್ತಾ ಮಾತಾಡಿದನು.

"ಏನಿದು! ಕಳ್ಳನಂತೆ ನೋಡುತ್ತೀ? ಒಳಗೆ ಬೇರೆ ಗೊಂಬೆಗಳನ್ನು ಇಟ್ಟಿರಬೇಕು ನೋಡು" ಎಂದು ಆಳಿಗೆ ಆಜ್ಞಾಪಿಸಿದನು.

ಒಳಗೆ ಹೋದ ಆಳಿಗೆ ಕಾಗದದ ಪೊಟ್ಟಣ ಕಣ್ಣಿಗೆ ಕಾಣಿಸಿತು. "ಅದೇನು ಮೂಟೆ?" ಎಂದು ಕೇಳಿದನು. ನಡುಗುತ್ತಲೇ ಇದ್ದ ಮುರುಗನು ಭಯದಿಂದ ತಾಳ್ಮೆಯನ್ನು ಕಳೆದುಕೊಂಡನು. "ಅಯ್ಯಾ, ಸ್ವಾಮಿ, ಅದನ್ನು ಮಾತ್ರ ತೆಗೆಯಬೇಡ" ಎಂದು ಅಳುತ್ತಾ ನುಡಿದನು.

"ಅದರಲ್ಲಿ ಏನಾದರೂ ಇರಬೇಕು. ಹಾಗೆಯೇ ತೆಗೆದುಕೊಂಡು ಬಾ" ಎಂದು ಕೃಷ್ಣನು ಹೇಳಿದನು.

"ನಿನಗೆ ಪುಣ್ಯ ಬರಲಿ, ಅದರಲ್ಲಿ ಏನೂ ಇಲ್ಲ. ಅದನ್ನು ಮುಟ್ಟಬೇಡ" ಎಂದು ಪೇಚಾಡಿದನು. ಮುರುಗ ಆ ಆಳಿನ ಕೈಗಳನ್ನು ಹಿಡಿದುಕೊಂಡು ಅಂಗಲಾಚಿದನು. ಅವನು ಚಿಮ್ಮುತ್ತಾ ಒಂದೇ ಸಮನೆ ನೆಗೆದು

ಹುಲಿಯಂತೆ ಆ ಕಾಗದದ ಮೂಟೆಯನ್ನು ತೆಗೆದುಕೊಂಡು ಹೊರಗೆ ಬಂದು ಬಿಟ್ಟನು.

"ಅಯ್ಯೋ" ಎಂಬ ಶಬ್ದದೊಡನೆ ಮುದುಗ ಕೆಳಗೆ ಬಿದ್ದು ಮೂರ್ಛೆ ಹೊಂದಿದನು. ಅವನ ತಂದೆ—ಏನೂ ಅರಿಯದ ಸಾತ್ವಿಕ ಚಮ್ಮಾರನು—ಅವನಿಗೆ ಶುಶ್ರೂಷೆ ಮಾಡತೊಡಗಿದನು.

ಬಲಿ ಕೊಡುವ ಬಂಡೆ ಸವಿಾಪಿಸಿತು. ಕೃಷ್ಣನು ಕೈಯಲ್ಲಿದ್ದ ಮೂಟೆಯನ್ನು ಬಿಚ್ಚತೊಡಗಿದನು. "ಕಳ್ಳ ಬಡ್ಡೀಮಗ ನಮ್ಮ ಹತ್ತಿರದಲ್ಲಿ ಮರೆಮಾಚಲು ನೋಡುತ್ತಾನೆ" ಎಂಬ ಯೋಚನೆಯಿಂದ ಅಂದು ಅವನಿಗೆ ಬಹಳ ಕೋಪ ಉಂಟಾಗಿದ್ದಿತು. ಒಂದೇ ಸಮನೆ ಆ ಮೂರ್ತಿಯನ್ನು ಸಾವಿರ ಚೂರುಗಳಾಗಿ ಮಾಡಲೆಣಿಸಿದ್ದನು.

ಮೂಟೆಯನ್ನು ಬಿಚ್ಚಿದನು. ಅವನ ದೃಷ್ಟಿ ಅದರೊಳಗೆ ಮರೆಯಾಗಿದ್ದ ಮೂರ್ತಿಯ ಮೇಲೆ ಬಿದ್ದಿತು. "ಆಹಾಹಾ!" ಎಂದು ಸ್ತಂಭಿತನಾದನು! ಅವನು ಕೈಗಳನ್ನು ಮೇಲಕ್ಕೆತ್ತಲೂ ಇಲ್ಲ; ಅದನ್ನು ಒಡೆಯಲೂ ಇಲ್ಲ. ಹಾಗೆಯೇ ದಿಗ್ಭ್ರಮೆ ಹೊಂದಿದವನಾಗಿ ನಿಂತುಬಿಟ್ಟನು. ಆ ಮೂರ್ತಿಯಲ್ಲಿ ತನ್ನ ಅಪ್ಪನ ಸಾಕ್ಷಾದ್ರೂಪವನ್ನು ಕಂಡನು. ಅವನಿಗೆ ಹಳೆಯ ಕಾಲದ ನೆನಪುಗಳು ಒಂದರ ಹಿಂದೆ ಒಂದಾಗಿ ಹೊಳೆದುವು. ಆ ಮೂರ್ತಿಯನ್ನು ಒಡೆಯಲು ಅವನಿಗೆ ಹೇಗೆ ಮನಸ್ಸು ಬರುವುದು? ಅದನ್ನು ನೋಡಿ ಮರುಗುತ್ತಾ ನಿಂತನು. ಅದುವರೆಗೆ ಎಷ್ಟೆಷ್ಟೋ ಉತ್ತಮೋತ್ತಮ ಗೊಂಬೆಗಳನ್ನು ಅವನು ರಾಕ್ಷಸನಂತೆ ಆ ಬಂಡೆಯಲ್ಲಿ ಒಡೆದಿದ್ದಾನೆ; ಆ ಗೊಂಬೆಗಳಲ್ಲೂ ಅದ್ಭುತವಾದ ಕಲಾಕೌಶಲ್ಯವು ಇದ್ದಿತು. ಆದರೂ ಕೃಷ್ಣನ ಹೃದಯವನ್ನು ಕಲಕಲಿಲ್ಲ.

ಇದಾದರೋ? ಇದನ್ನು ಮಾಡಿದ ಕಲಾವಿದನು ತನ್ನ ಜೀವನವನ್ನು ಬಣ್ಣವಾಗಿ ಹಿಂಡಿ ಸೃಷ್ಟಿಮಾಡಿರುವನು; ತನ್ನ ಕಲ್ಪನೆಯನ್ನು ಮೂರ್ತಿಮತ್ತಾಗಿ ಕೂಡಿಸಿದ್ದಾನೆ; ತನ್ನ ಪ್ರೇಮವನ್ನು ಕಲಿಸಿ ಮೆರಗು ಕೊಟ್ಟಿರುವನು. ಆದುದರಿಂದ ಇದು ಬೆಲೆಯಿಲ್ಲದ ಪ್ರತಿಮೆ. ಈ ಗೊಂಬೆಯು

ಯಾವ ಜೀವವುಳ್ಳ ದೇಹವನ್ನು ನೆನೆದು ಮಾಡಲ್ಪಟ್ಟಿತೋ ಆ ದೇಹವು ಅಳಿಸಿ ಹೋಯಿತು; ಇದು ಅಳಿಸಿ ಹೋಗಲಾರದು.

ಕೃಷ್ಣನಿಗಾದರೋ ಇದು ತನ್ನ ತಂದೆಯ ಸಜೀವ ಚಿತ್ರ. ಇದರ ಮೂಲಕವಾಗಿ ಅವನು ತಂದೆಯನ್ನು ಕಂಡನು. ಪ್ರೇಮವು ಸಕಲವಿಧವಾದ ತಡೆಗಳನ್ನೂ ಕಿತ್ತುಕೊಂಡು ಹೊರಬಿದ್ದಿತು. "ಎಂತಹ ಸೌಂದರ್ಯ! ಎಂತಹ ಪ್ರೇಮ! ಇದನ್ನು ನಾನು ಒಡೆದು ಬಿಟ್ಟಿದ್ದರೆ ಎಂತಹ ಪಾಪಕೃತ್ಯವನ್ನು ಮಾಡಿದಂತಾಗುತ್ತಿತ್ತು!" ಎಂದು ನೆನೆದನು. ಅವನ ಕಣ್ಣುಗಳಲ್ಲಿ ಕಣ್ಣೀರಿನ ಬಿಂದುಗಳು ಕಂಡವು. ಅವನ ಅಸೂಯೆಯೂ ಕ್ರೋಧವೂ ಕಾಲ್ದೆಗೆದೋಡಿದವು.

ಅರ್ಧ ಘಂಟೆಯ ಕಾಲ ಕಣ್ಣುಮಿಟಿಕಿಸದೆ ಆ ಮೂರ್ತಿಯನ್ನೇ ನೋಡುತ್ತಾ ನಿಂತನು. ಅವನ ಮನದೊಳಗೆ ಹಲವು ನೆನಪುಗಳು ಎದ್ದು ಎದ್ದು ತೋರಿದವು. ಏನೋ ನಿರ್ಧರಿಸಿದವನಂತೆ ಆ ಮೂರ್ತಿಯನ್ನು ಕಣ್ಣಿಗೆ ಒತ್ತಿಕೊಂಡು ಹಿಂತಿರುಗಿ ಚಮ್ಮಾರ ಕೇರಿಯ ಕಡೆಗೆ ಬಂದನು. ಒಂಟಿಯಾಗಿ ಬಂದನು; ಆಳೊಡನೆಯಿಲ್ಲ.

* * * *

"ತಮ್ಮಯ್ಯಾ ಮುರುಗಾ" ಎಂಬ ಗದ್ಗದ ಸ್ವರವೊಂದು ಹೊರಗಡೆ ಕೇಳಿಸಿತು.

ಮುರಗ ಆಶ್ಚರ್ಯದೊಡನೆ ಹೊರಗೆ ಬಂದನು. ಕೃಷ್ಣನೆಲ್ಲಿಯಾದರೂ ತಮ್ಮಯ್ಯನೆಂದು ಕರೆಯುವನೇ! ಎಂದೆಂದೂ ನಂಬಲಾಗದ ಕಾರ್ಯ ಎಂದು ಅಂದುಕೊಂಡನು. "ತಮ್ಮಯ್ಯ" ಎಂದು ಎರಡನೆಯಾವರ್ತಿ ಕರೆದ ನಂತರವೇ ನಿಜವೆಂದು ತೋರಿತು.

"ತಮ್ಮಯ್ಯಾ, ನೀನು ನನ್ನನ್ನು ಕ್ಷಮಿಸುವೆಯಾ?"

"ಇದೇನಿದು? ಕನಸು ಕಾಣುತ್ತಿದ್ದೇನೆಯೋ? ಕೃಷ್ಣನೇನು ಹೀಗೆ ಮಾತನಾಡುವುದು?"—ಕಣ್ಣನ್ನು ಉಜ್ಜಿಕೊಂಡು ನೋಡಿದನು.

ಕಣ್ಣಲ್ಲಿ ನೀರೂರುತ್ತಿರಲು ಗದ್ಗದ ಸ್ವರದಲ್ಲಿ ಮಾತನಾಡುತ್ತಾ ಕೈಯಲ್ಲಿ ಆ ಸುಂದರವಾದ ಮೂರ್ತಿಯನ್ನು ಹಿಡಿದಂತೆಯೇ "ತಮ್ಮಯ್ಯಾ, ನಾನು ಪಾಪಿ! ನಿನ್ನನ್ನು ಪಾಪಿಷ್ಠನೆಂದು ಹೇಳಿದುದು ಮಹಾಪರಾಧ" ಎಂದನು.

"ಇದೇನು ಅಣ್ಣಯ್ಯಾ! ನಿನ್ನ ಮಾತು ಬಗೆಹರಿಯಲಿಲ್ಲವಲ್ಲಾ? ಏಕೆ ಇದನ್ನು ಹಿಂತಿರುಗಿ ತಂದಿರಿ?"

"ಇಕೋ ಅಪ್ಪಾ! ನಿನ್ನ ಅಪ್ಪನನ್ನು ನೀನೇ ತೆಗೆದುಕೋ. ಅಪ್ಪನಿಗೆ ನೀನೇ ಮಗ. ನಾನು ಮಗನಲ್ಲ. ಅಪ್ಪನು ಜೀವದಿಂದ ಇದ್ದಾಗ ನಿನ್ನನ್ನು ಸಹಿಸಲಸಾಧ್ಯವಾದಷ್ಟು ಕಷ್ಟಪಡಿಸಿದೆ. ಅಪ್ಪನಿಂದ ನಿನ್ನನ್ನು ಬೇಕೆಂದು ಅಗಲಿಸಿದೆ. ಅಪ್ಪನು ಸಾಯುವಾಗ ಕೂಡ ನಿನ್ನನ್ನೇ ಜ್ಞಾಪಿಸಿಕೊಂಡನು. ಸತ್ತುಹೋದ ಮೇಲಾದರೂ ಅವನು ನಿನ್ನೊಡನೆ ಇರುವುದನ್ನು ಏಕೆ ಅಗಲಿಸಲಿ? ನಿನ್ನ ಹಳೆಯ ಗೊಂಬೆಗಳನ್ನೂ, ಅದರ ಅದ್ಭುತವನ್ನು ತಿಳಿಯದ ಪಾಪಿಷ್ಠನಾದ ನಾನು ಒಡೆದು ಹಾಕಿದೆನು. ಇಕೋ, ಇದನ್ನು ತೆಗೆದುಕೋ ನಿನ್ನ ಅಪ್ಪನನ್ನು ನೀನು ಹೃದಯದಲ್ಲಿಟ್ಟು ಪೂಜಿಸಿ ಬರುವುದು ನನಗೆ ಈಗ ಚೆನ್ನಾಗಿ ತಿಳಿಯುತ್ತದೆ. ಆ ಅಪ್ಪನ ವಿಗ್ರಹವನ್ನು ಹೀಗೆ ಸೃಷ್ಟಿಸಿದ ನಿನ್ನ ಕೈಯನ್ನು ನನ್ನ ಕಣ್ಣಿನಲ್ಲಿ ಒತ್ತಿಕೊಳ್ಳಬೇಕು. ಇಕೋ, ತೆಗೆದುಕೋ. ನನ್ನನ್ನು ಕ್ಷಮಿಸಿಬಿಡು. ಜಾತಿಯೇತರದು, ಕುಲವೇತರದು! ಪ್ರೇಮಕ್ಕೆ ಮೀರಿದ ದೈವ ಸಹಾ ಇಲ್ಲ. ಇದೆಲ್ಲವೂ ಈ ಪಾಪಿಗೆ ಈಗ ತಾನೆ ತಿಳಿಯುತ್ತದೆ."

"ಅಣ್ಣಯ್ಯಾ, ಹೀಗ ಏಕೆ ಮಾತನಾಡುತ್ತೀರಿ? ನನ್ನ ಅಪ್ಪನು ಎನ್ನುತ್ತೀರಲ್ಲಾ! ನಿಮಗೆ ಅಪ್ಪನಲ್ಲವೇ?"

ಮೊಟ್ಟಮೊದಲು ನಿನಗೇ ಅಪ್ಪ. ಆ ಮೇಲೆ ಅವನ ಆತ್ಮಕ್ಕೆ ಸಮ್ಮತವಾದರೆ ನನಗೆ ಅಪ್ಪ. ಇಕೋ, ತೆಗೆದುಕೋ."

ಕಣ್ಣೀರು ಸುರಿಸುತ್ತಾ ಮುರುಗ ಅದನ್ನು ಕೈ ನೀಡಿ ತೆಗೆದುಕೊಂಡನು.

"ಅಣ್ಣಯ್ಯಾ, ಇದೇ ನಾನು ಮನಸ್ಸಿಟ್ಟು ನನ್ನ ಪ್ರಾಣದಂತೆ ಎಣಿಸಿ ಮಾಡಿದ್ದು. ನನ್ನ ಮನಸ್ಸಿನಲ್ಲಿ ಇದ್ದ ಆಶೆಯು ಈಗ ನೆರವೇರಿತು. ಇನ್ನು ಮೇಲೆ ಸತ್ಯವಾಗಿಯೂ ಈ ಕಸಬನ್ನು ಬಿಟ್ಟುಬಿಟ್ಟೆನು. ಚಪ್ಪಲಿ ಹೊಲಿಯುವುದೊಂದೇ ನನಗೆ ಸಾಕಷ್ಟು ಕೆಲಸ."

ಕಲಾವಿದನು ತನ್ನ ಕಲೆಯನ್ನು ತ್ಯಾಗಮಾಡಿಬಿಟ್ಟನು.

ಇಬ್ಬರ ಕಣ್ಣುಗಳಲ್ಲಿಯೂ ಕಣ್ಣೀರಿನ ಬುಗ್ಗೆಗಳು ಎದ್ದವು. ಆ ಬುಗ್ಗೆಗಳಲ್ಲಿ ಎಂತೆಂತಹ ಗುಣಗಳು ಕರಗಿ ಹೊರಬಿದ್ದವೆಂಬುದನ್ನು ಪ್ರತ್ಯೇಕವಾಗಿ ಬಿಡಿಸಿ ತಿಳಿಯುವುದು ಸಾಧ್ಯವೇ?

---

# ಮಿಠಾಯಿಯವನು

ಅವನೊಬ್ಬ ವರ್ತಕ. ಅವನ ವ್ಯಾಪಾರ, ಪ್ರಕಟನೆಯೆಲ್ಲವೂ ಪ್ರತ್ಯೇಕ ರೀತಿಯಾದದ್ದು. ಮತ್ತೊಬ್ಬರ ಕೈಯನ್ನು ನಿರೀಕ್ಷಿಸುತ್ತಾ ಬಾಳುವವರ ಪೈಕಿ ಅಲ್ಲ ಅವನು. ತಾನೇ ದುಡಿದು ವ್ಯಾಪಾರಮಾಡಿ ಸಂಪಾದಿಸುವವನು. ಅವನಿಗೆ ಸಹಾಯಕರಾರೂ ಆವಶ್ಯಕವಿಲ್ಲ.

ಮುನಿಸ್ವಾಮಿಯನ್ನೇ ಕುರಿತು ನಾನು ಈಗ ಹೇಳುತ್ತಿರುವುದು; ಆ ಮಿಠಾಯಿ ಮುನಿಸ್ವಾಮಿ ಇರುವನಲ್ಲಾ ಅವನನ್ನೇ. ಪ್ರಪಂಚದ ಭವಿಷ್ಯತ್ಕಾಲದ ಪ್ರಜೆಗಳಾದ ಮಕ್ಕಳೇ ಅವನ ವಾಡಿಕೆಯವರು. ಮಿಠಾಯಿ ಲಾವಣಿಯನ್ನು ಹಾಡುತ್ತಾ ಹೋಗುವಾಗ ಆ ಜಾಹೀರಾತೇ ಎಷ್ಟೊಂದು ಮಕ್ಕಳನ್ನು ಆಕರ್ಷಿಸಿಬಿಡುತ್ತದೆ!

ಪಾಠಶಾಲೆಗಳಿಗೆ ಸಂಬಂಧಪಟ್ಟ ಅನೇಕ ವಿಷಯಗಳು ಅವನಿಗೆ ಗೊತ್ತು. ಓದನ್ನು ಕುರಿತಲ್ಲ. "ಶಂಕರಸೆಟ್ಟರ ಬೀದಿಯಲ್ಲಿ ಉತ್ತರ ದಿಕ್ಕನ್ನು ಕುರಿತು ನೋಡುತ್ತಲಿರುವ ಕೆಂಪು ಬಣ್ಣದ ಪಾಠಶಾಲೆಯಲ್ಲಿ ನೂರು ಹುಡುಗರು ಓದುತ್ತಾರೆ; ಅವರಲ್ಲಿ ಹುಡುಗಿಯರೂ ಉಂಟು" ಎಂದು ಅವನು ಲೆಕ್ಕ ಒಪ್ಪಿಸುವನು. ತನ್ನ ಅನುಭವವಲ್ಲಿ ಅವನು ತಿಳಿದಿದ್ದ ವಿಷಯವಿದು.

ಒಂಬತ್ತು ಘಂಟೆಗೆ ಸರಿಯಾಗಿ ತನ್ನ ಮಿಠಾಯಿ ತಟ್ಟೆಯೊಡನೆ ಪಾಠಶಾಲೆಯ ಬಾಗಿಲ ಮುಂದೆ ಬಂದು ನಿಲ್ಲುವನು. ಹತ್ತೂವರೆ ಹನ್ನೊಂದು ಘಂಟೆಯವರೆಗೂ ವ್ಯಾಪಾರ ನಡೆಯುವುದು. ಅನಂತರದಲ್ಲಿ ಸ್ವಲ್ಪ ಹೊರಗಿನ ವ್ಯಾಪಾರವನ್ನು ಗಮನಿಸಲು ಹೊರಡುವನು. ಬಿಸಿಲು ೧೦೮ ಡಿಗ್ರಿ ಕಾಯಲೇನೀಗ? ಅವನಿಗೆ ಸ್ವಲ್ಪವೂ ಲಕ್ಷ್ಯವಿಲ್ಲ. ಅವನ ಮಿಠಾಯಿಯು ಕರಗಿ ನೀರಾಗಿ ಬಿಟ್ಟರೂ ಅವನ ಯತ್ನ ಕೊಂಚವೂ ಕರಗಲೊಲ್ಲದು.

ಒಂದು ಘಂಟೆ ಹೊಡೆಯಲು ಐದು ನಿಮಿಷಕ್ಕೆ ಮುಂಚಿತವಾಗಿಯೇ ಪಾಠ ಶಾಲೆಯ ಮುಂಭಾಗದಲ್ಲಿ ಪುನಃ ಪ್ರಸನ್ನನಾಗುವನು. ಮಕ್ಕಳಿಗೆ ಅದು ಊಟದ ಸಮಯ ಒಂದು ಘಂಟೆಯಿಂದ ಹಿಡಿದು ಎರಡು ಘಂಟೆಯವರೆಗೆ ವ್ಯಾಪಾರವು ಬಹಳ ಜೋರಾಗಿ ನಡೆಯುವುದು. ಎರಡೂವರೆ ಘಂಟೆಗೆ ಪುನಃ ನಗರ ಪ್ರದಕ್ಷಿಣೆಗೆ ಬರುವನು. ದೊರಕಿದಷ್ಟು ಲಾಭವೆಂದು ರಸ್ತೆ ರಸ್ತೆಯಾಗಿ ಗಲ್ಲಿ ಗಲ್ಲಿಯಾಗಿ ತಿರುಗುವನು. ನಾಲ್ಕು ಘಂಟೆಗೆ ಸರಿಯಾಗಿ ಪಾಠ ಶಾಲೆಯ ಮುಂದುಗಡೆ ಹಾಜರಾಗಿ ಬಿಡುವನು. ಹುಡುಗರು ನಾಲ್ಕೂವರೆ ಘಂಟೆ ಹೊಡೆದ ತಕ್ಷಣ ಪಾಠಶಾಲೆಯೆಂಬ ಸೆರೆಯಿಂದ ಹೊರಗೆ ಬರುವರು. ಮನೆಗೆ ಹೋಗುವ ದಾರಿಯಲ್ಲಿ ಬಾಯಲ್ಲಿ ಅಡಗಿಸಿಕೊಳ್ಳಲು ಈರುಳ್ಳಿಯ ಮಿಠಾಯಿಯೊಂದನ್ನೋ ಒಂದು ಕೊಬ್ಬರಿಯ ಮಿಠಾಯಿಯನ್ನೋ ಕೊಂಡು ಕೊಳ್ಳುವರು. ಮುನಿಸ್ವಾಮಿಯು ಒಂದು ದಿನವೆಲ್ಲಾ ಒಂದೇ ಪಾಠಶಾಲೆಯಲ್ಲಿ ವ್ಯಾಪಾರ ಮಾಡುವುದೂ ಉಂಟು; ದಿವಸಕ್ಕೆ ಒಂದೊಂದು ಪಾಠ ಶಾಲೆಯಾಗಿ 'ಸರ್ದಿ' ಹಾಕಿಕೊಂಡು ಹೋಗುವುದೂ ಉಂಟು. ಅದು ಹೇಗೋ ಸಂಜೆಯೊಳಗೆ ಅವನಿಗೆ ಎಂಟಾಣೆಯ ಕಾಸು—ಎಲ್ಲವೂ ಕಾಸುಗಳೇ, ಅದರಲ್ಲೂ ಮುಕ್ಕಾಲುಪಾಲು ಬಿಡಿಕಾಸುಗಳೇ, ಸಿಗುವುವು. ಅದನ್ನು ತೆಗೆದು ಕೊಂಡು ಮನೆಗೆ ಹೋಗುವನು.

ಮುನಿಸ್ವಾಮಿಗೆ ಈ ವ್ಯಾಪಾರವು ನಿರಂತರವಾಗಿ ನಡೆಯುತ್ತಲಿದ್ದಿತು. ಮಕ್ಕಳಿಗೆ ರಜಾ ದಿವಸ ಬಂದರೆ ಮಾತ್ರ ಅವನಿಗೆ ವ್ಯಾಪಾರದಲ್ಲಿ ಸ್ವಲ್ಪ ತೊಂದರೆ. ಅಂದು ಅಲೆದಾಟವೂ ಅಧಿಕವಾಗಿರುವುದು. ವ್ಯಾಪಾರದಲ್ಲಿ 'ಲೀವ್' ಬಿಡಲಾಗುವುದೇ? ಹೊಟ್ಟೆಗೆ 'ಲೀವ್' ಕೊಟ್ಟರಲ್ಲವೇ ಅದು ಸಾಧ್ಯ.

ಭಿಕ್ಷಾನ್ನದಲ್ಲಿ ಶನೀಶ್ವರನು ನುಗ್ಗಿದಂತೆ ಈ ವ್ಯಾಪಾರದಲ್ಲಿ ಪೈಪೋಟಿಯು ಏರ್ಪಟ್ಟಿತು. ಮುನಿಸ್ವಾಮಿಯು ಕೇವಲ ಮಿಠಾಯಿಯೊಂದನ್ನು ಮಾತ್ರ ವ್ಯಾಪಾರ ಮಾಡುವುದರಲ್ಲಿ ಹಿಂದಿನ ಲಾಭವನ್ನು ಕಾಣಲಿಲ್ಲವಾದುದರಿಂದ ಹೊಸ ಹೊಸ ನಮೂನೆಯ ವಸ್ತುಗಳನ್ನು ಅವನು ಮಾಡಲಾರಂಭಿಸಿದನು. ಹುರಿಗಡಲೆಯ ಉಂಡೆ, ಎಳ್ಳುಂಡೆ, ಚಿರುಪು ಇವೆಲ್ಲವೂ ಅವನ ಸ್ಥಳವನ್ನಾಕ್ರಮಿಸಿಕೊಂಡವು.

ಭಾನುವಾರಗಳಲ್ಲಿ ತನ್ನ ಮನೆಯಲ್ಲಿಯೇ ಒಂದು ವಾರದವರೆಗೆ ಬೇಕಾಗುವಷ್ಟು ಮಿಠಾಯಿಗಳನ್ನು ತಯಾರಿಸುವನು. ಅವನ ಹೆಂಡತಿ ಅವನಿಗೆ ನೆರವಾಗುವಳು. ಅವಳು ನಾಲ್ಕಾರು ಮನೆಗಳಲ್ಲಿ ಕಸ ಮುಸುರೆ ಮಾಡಿ ತಿಂಗಳಿಗೆ ನಾಲ್ಕು ರೂಪಾಯಿ ಸಂಪಾದಿಸುವಳು. ಇಬ್ಬರೂ ದೊರಕಿದಷ್ಟು ಮಡಗಿಕೊಂಡು ಗಂಜಿಯೋ, ಅಂಬಲಿಯೋ, ರಾಗಿಯ ಮುದ್ದೆಯೋ ಏನಾದರೊಂದನ್ನು ಮಾಡಿ ಹೊಟ್ಟೆ ಹೊರೆದುಕೊಂಡು ಗೃಹ ಕೃತ್ಯವನ್ನು ನಡೆಸುತ್ತಲಿದ್ದರು. ಅವರ ಪ್ರೇಮಕ್ಕೆ ಗುರುತಾಗಿ ಗಂಡು ಮಗುವೊಂದು ಹುಟ್ಟಿ ಮನೆಯಲ್ಲಿ ಬೆಳೆಯುತ್ತಲಿದ್ದಿತು.

ಪಾಠಶಾಲೆಗಳಲ್ಲಿ ಬೇಸಿಗೆಯ ರಜ ಪ್ರಾರಂಭವಾಗಿಬಿಟ್ಟಿತು. ಒಂದೂವರೆ ತಿಂಗಳಕಾಲ ಆ ಗೂಡುಗಳಲ್ಲಿ ಮಕ್ಕಳ ಗಿಜಿ ಗಿಜಿ ಶಬ್ದ ಕೇಳಬರದು. ಸ್ಥಳದಲ್ಲಿ ನೆಲೆಸಿದ್ದ ಸೌಂದರ್ಯವೂ ಜೀವಕಳೆಯೂ ಅಳಿದುಹೋಗಿದ್ದವು. ಮುನಿಯನು ಕೂಡ ಆ ಕಡೆಯಲ್ಲಿ ಕಾಣಿಸಿ ಕೊಳ್ಳಲಿಲ್ಲ.

ಪಾಠಶಾಲೆಯು ಇಲ್ಲದ ಈ ಮೌನವಾದ ಪರಿಸ್ಥಿತಿಯು ಅವನಿಗೆ ಜುಗುಪ್ಸೆಯನ್ನು ಉಂಟುಮಾಡಿತು. ಮಕ್ಕಳಿಗೆ ಈ ರಜೆಯು ನಿದ್ರೆಯಂತಹ ವಿರಾಮವನ್ನು ಕಲ್ಪಿಸಿತು. ಮುನಿಸ್ವಾಮಿಯಾದರೋ ಇದನ್ನು ಮರಣಾವಸ್ಥೆಯ ವಿರಾಮದಂತೆ ಭಾವಿಸಿದನು. ಅವನ ಬದುಕಿನಲ್ಲಿ ಅವನಿಗೆ ವಾಸ್ತವವಾಗಿ ಏರ್ಪಡತಕ್ಕಂತಹ ಗಂಡಾಂತರಗಳು ಆ ರಜೆಯ ದಿನಗಳೇ ಹೌದು. ಮಿಕ್ಕ ದಿವಸಗಳೆಲ್ಲವೂ ಅವನಿಗೆ ವೇಗವಾಗಿ ಓಡುತ್ತಲಿದ್ದವು. ಆ ರಜೆಯ ದಿವಸಗಳಾದರೋ ಅತ್ಯಂತ ನಿಧಾನವಾಗಿ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತಾ ಅವನನ್ನು ನೋಡಿ ಹೆದರಿಸುತ್ತಲೇ ಹೋಗುತ್ತಲಿದ್ದವು.

ಆ ಕಾಲಗಳಲ್ಲಿ ಬಿಸಿಲಿನ ತಾಪ ಹೆಚ್ಚು; ಅಲೆದಾಟವೂ ಹೆಚ್ಚು. ಸಂಧ್ಯಾಕಾಲದಲ್ಲಿ ಮನೆಗೆ ಹಿಂದಿರುಗಿ ಬರುವಾಗ ಕರುಳು ಕುಗ್ಗಿ, ಮೈಕುಗ್ಗಿ ಬರುವನು.

"ಈ ವರ್ಷದ ಬೇಸಿಗೆಯ ರಜ ಹೇಗೆ ಹೇಗೋ ಕಳೆದುಬಿಡುವುದು ; ಇನ್ನು ಒಂದು ವಾರ ಮಾತ್ರವೇ ಇರುವುದಲ್ಲವೇ ? ಎಲ್ಲಿಯಾದರೂ ಸಾಲ ತೆಗೆದು ತಂದು ಸಕ್ಕರೆ ಎಳ್ಳು ಹುರಿಗಡಲೆ ಕೊಂಡು ತಂದು ಮಿಠಾಯಿ

ಗಳನ್ನೂ ಮಿಕ್ಕ ತಿಂಡಿಗಳನ್ನೂ ತಯಾರಿಸಿ ಇಟ್ಟುಕೊಳ್ಳಬೇಕು'' – ಎಂದು ಅಂದುಕೊಂಡನು. ಹಣ ಕೊಡುವವರು ತಾನೇ ಯಾರಿರುವರು? ಅವನ ಹೆಂಡತಿ ತಾನು ಕೆಲಸಮಾಡುವವರ ಮನೆಗಳಲ್ಲೊಂದು ಮನೆಯ ಅಮ್ಮನವರ ಹತ್ತಿರದಿಂದ ಎರಡು ರೂಪಾಯಿ ಕೇಳಿ ತಂದಳು. ಸಕ್ಕರೆ ಮುಂತಾದ ಸಾಮಾನುಗಳನ್ನು ಕೊಂಡು ತಂದು ಹೊಸ ವರ್ಷದ ವ್ಯಾಪಾರ ಕ್ಕಾಗಿ ವಸ್ತುಗಳನ್ನು ತಯಾರಿಸತೊಡಗಿದನು.

ಮಗುವಿಗೆ ಎರಡು ವರ್ಷ ತುಂಬುತ್ತದೆ. ಯಾವುದನ್ನು ಕಂಡರೂ ಬಾಯಲ್ಲಿ ಹಾಕಿಕೊಂಡು ರುಚಿನೋಡುವ ಪ್ರಾಯವದು. ಅದಕ್ಕೆ ಆ ಮಿಠಾಯಿ ಯಲ್ಲಿ ಚೆದರಿಹೋದದ್ದನ್ನು ಕೂಡ ಕೊಡಲು ಅವನಿಗೆ ಮನಸ್ಸು ಬರು ತ್ತಿರಲಿಲ್ಲ. ಮಿಠಾಯಿಯನ್ನು ಸವಿಯುವ ಅಂತಸ್ತು ಅದಕ್ಕಿಲ್ಲವೆಂಬುದು ಒಂದು ಕಾರಣ; ಅದಲ್ಲದೆ ಬೇರೊಂದು ಕಾರಣವೂ ಉಂಟು. ''ಒಂದು ದಿವಸ ಕೊಟ್ಟು ಅಭ್ಯಾಸ ಮಾಡಿಬಿಟ್ಟಲ್ಲಿ ದೊಡ್ಡ ತೊಂದರೆಗೀಡಾಗುವುದು'' ಎಂದು ಅವನು ತಿಳಿದಿದ್ದನು. ಆದರೂ ಆ ಎಳೆಯ ಮಗುವು ಈ ಕಾರಣ ಗಳ ನ್ಯಾಯ ಅನ್ಯಾಯಗಳನ್ನು ತಿಳಿದುಕೊಳ್ಳಲಾದೀತೆ?

''ಅಪ್ಪಾ, ನನಗೊಂದು ಮಿಠಾಯಿ'' ಎಂದು ಕೇಳುವುದು ಮಗು.

''ಲಾತಾ ಅಷ್ಟೇ'' ಎಂದು ಹೇಳುವನು ಮುನಿಸ್ವಾಮಿ. ಇತರ ಮಕ್ಕಳೊಡನೆ ಸವಿಯಾಗಿ ಮಾತನಾಡಿ ವ್ಯಾಪಾರ ಮಾಡುವವನಿಗೆ ತನ್ನ ಮಗುವಿನೊಡನೆ ಪ್ರೇಮಪೂರ್ವಕವಾಗಿ ಮಾತನಾಡಲು ತಿಳಿಯಲಿಲ್ಲ. ಅವನಿಗೆ ಆ ಮಕ್ಕಳು "ವರ್ತನೆಯವರು"; ಈ ಮಗುವಾದರೋ ತನ್ನ ಅಧಿ ಕಾರಕ್ಕೆ ಒಳಪಟ್ಟ ಪುಟಾಣಿ ಗುಲಾಮ. ಅವನು ಮನಸ್ಸಾಕ್ಷಿಯಾಗಿ ಆ ರೀತಿಯಾಗಿ ತಿಳಿದಿದ್ದನೋ ಇಲ್ಲವೋ, ಅವನ ದಿನವಹಿ ಜೀವನವು ಅವನನ್ನು ಹಾಗೆ ಮಾಡಿಬಿಟ್ಟಿತು.

"ಮಗುವಿಗೇನು ಗೊತ್ತುಂಟು? ಅದರ ಮೇಲೆ ರೇಗಿ ಬೀಳುತ್ತೀ ಯಲ್ಲಾ!'' ಎಂದು ಅವನ ಹೆಂಡತಿ ಕೇಳುವಳು.

''ದೂರ ತೊಲಗೇ ಕತ್ತೆ ; ಇವನಿಗೆ ಮಿಠಾಯಿಯಿಲ್ಲದೆ ಕಮ್ಮಿಯಾದ ದ್ದೇನು!'' ಎಂದು ರೇಗುವನು.

"ಅಯ್ಯೋ ಪಾಪಿಷ್ಠ; ಕೂಸಿಗೆ ಕೊಡದೆ ಅದೇನನ್ನು ಕೂಡಿಟ್ಟು ಬಿಡುತ್ತೀವೋ ಕಾಣೆ!" ಎಂದು ಅವಳು ಮನದೊಳಗೆ ಗೊಣಗುಟ್ಟಿಕೊಳ್ಳುವಳು.

ಮಗು ಇಬ್ಬರಿಗೂ ನಡುವೆ ನಿಂತು ಅಳುವುದು. ಆ ರೋದನವು ತಾಯಿಯ ಕರುಳನ್ನು ಕಲಕುವುದು. ತಂದೆಯ ಕಣ್ಣುಗಳಲ್ಲಿ ಬೆಂಕಿಯ ಕಿಡಿಗಳನ್ನು ಉಂಟುಮಾಡುವುದು. ಆದರೂ ಅವನು ಮಗುವನ್ನು ಹೊಡೆಯುತ್ತಿರಲಿಲ್ಲ. ಅವನು ಅಷ್ಟು ದೂರ ಕಠಿನ ಹೃದಯನಾಗಿರಲಿಲ್ಲ.

* * * *

ಅಂದು ಪಾಠಶಾಲೆಗಳು ತೆರೆಯುವ ದಿವಸ. ಮುನಿಸ್ವಾಮಿ ಮುಂಜಾನೆ ಅತಿ ಶೀಘ್ರವಾಗಿಯೇ ಎಚ್ಚತ್ತು ಬಿಟ್ಟನು. ಹೊಸ ಯುಗಾದಿ ಹಬ್ಬದಂತೆ ಆ ದಿನವನ್ನು ಭಾವಿಸಿದನು. ತನ್ನ ಮಿಠಾಯಿ ತಟ್ಟೆಗೆ ಬಣ್ಣದ ಕಾಗದಗಳನ್ನು ಕೊಂಡು ತಂದು ಅಂಟಿಸಿ ಅಲಂಕರಿಸಿದನು. ಮಾಡಿದ್ದ ಮಿಠಾಯಿಗಳನ್ನು ಆ ತಟ್ಟೆಯ ತುಂಬ ತೆಗೆದಿಟ್ಟನು. "ಭಗವಂತ, ಪರಮಾತ್ಮಾ! ಇಂದೇ ಪ್ರಾರಂಭ, ಚೆನ್ನಾಗಿ ಬೆಲೆ ಹೋಗಬೇಕು." ಎಂದು ದೇವರ ಪ್ರಸಾದವಾದ ಅರ್ಚಿಸಿದ ಕುಂಕುಮವನ್ನು ತೆಗೆದು ಹಣೆಗೆ ಹಚ್ಚಿಕೊಂಡನು. ತಲೆಗೆ ಪೇಟ ಕಟ್ಟಿಕೊಂಡನು. ಸಣ್ಣ ಕಬ್ಬಿಣದ ಘಂಟೆಯನ್ನು ಹಿಂದಿನ ದಿವಸ ತೆಗೆದಿಡಲು ಮರೆತು ಹೋಗಿದ್ದನು. ಆದುದರಿಂದ ಅದನ್ನು ಹೊರಗೆ ತೆಗೆದು ಅದಕ್ಕೂ ಮಿಠಾಯಿತಟ್ಟೆಗೂ ಕುಂಕುಮಹಚ್ಚಿದನು.

ಸ್ವಲ್ಪ ಗಂಜಿ ಕುಡಿದು ಕೈಯನ್ನು ತೊಳೆದುಕೊಂಡನು. ಆ ಕೆಲ ನಿಮಿಷಗಳೊಳಗಾಗಿ ಮಗು ಮಿಠಾಯಿಯ ತಟ್ಟೆಯ ಸಮೀಪಕ್ಕೆ ಹೋಗಿಬಿಟ್ಟಿತು ಆದರಿಂದ ಒಂದು ಮಿಠಾಯಿಯನ್ನು ತೆಗೆದು ಬಾಯಲ್ಲಿಟ್ಟುಕೊಂಡು ರುಚಿನೋಡುತ್ತಲಿದ್ದಿತು.

ಮುನಿಸ್ವಾಮಿ ಬಂದು ನೋಡಿದನು; "ಪಾಪಿಷ್ಠ ಮಗುವೇ!" ಎಂದು ಹೇಳುತ್ತಾ ಆ ಎಳೆಯ ಮಗುವಿನ ಕೆನ್ನೆಗೆ ಪಟೀರ್ ಎಂದು ಒಂದೇಟನ್ನು ಕೊಟ್ಟನು. ಆ ತಟ್ಟೆಯನ್ನು ತೆಗೆದುಕೊಂಡು ಹೊರಟು ಬಿಟ್ಟನು.

ಮಗು ಅಲ್ಲಿಯೇ ಬಿದ್ದುಕೊಂಡು ಗಟ್ಟಿಯಾಗಿ ಕಿರಿಚತೊಡಗಿತು. ಬಾಯಲ್ಲಿ ಅರ್ಧವೂ ಕೈಯಲ್ಲಿ ಅರ್ಧವೂ ಇದ್ದ ಮಿಠಾಯಿ ಅವನು ಹೊಡೆದ

ಏಟಿನ ಜೋರಿಗೆ ಕೆಳಗೆ ಬಿದ್ದು ಹೋಯಿತು ಮಗುವಿಗೆ ಜೀವ ನಡುಗಲು, ಅದು ಬಲವಾಗಿ ಕಿರಿಚಿಕೊಂಡು ಅಳತೊಡಗಿತು.

ತಾಯಿ ಓಡಿ ಬಂದಳು; ಮಗುವನ್ನು ಬಾಚಿ ತೆಗೆದುಕೊಂಡಳು. "ಅಯ್ಯೋ! ಮಹಾಪಾತಕ, ಕೂಸನ್ನು ಕೊಂದು ಬಿಟ್ಟೆಯಲ್ಲೋ!" ಎಂದು ಹಲುಬಿದಳು; "ನನ್ನ ಬಂಗಾರ; ದೇವರಿಗೆ ಕಣ್ಣಿಲ್ಲವೇ? ನಿನ್ನನ್ನು ನನ್ನ ಹಾಳು ಹೊಟ್ಟೆಯಲ್ಲೇಕೆ ಹುಟ್ಟಿಸಿದನು? ಎಲ್ಲಾದರೂ ಒಬ್ಬ ತೋಟಿಯ ಹೊಟ್ಟೆಯಲ್ಲಿ ಹುಟ್ಟಿದ್ದರಾದರೂ ಸುಖವಾಗಿದ್ದಿರಬಹುದಲ್ಲಾ. ಈ ಮನುಷ್ಯ ಮೃಗದ ಹತ್ತಿರದಲ್ಲಿ ಬಂದು ಸಿಕ್ಕಿ ಬಿದ್ದೆಯಲ್ಲಾ. ಎಲ್ಲವೂ ನಾನು ಮಾಡಿದ ಪಾಪವಷ್ಟೇ. ಅಯ್ಯೋ! ಮೊದಲಿಯಾರ್ರ ಮನೆಗೆ ಕರೆದ ಕೊಂಡು ಹೋಗಿದ್ದಾಗ "ರಾಜನ ಹಾಗಿದೆ ಮಗು; ಜಾಗ್ರತೆಯಾಗಿ ನೋಡಿಕೋ" ಎಂದು ಎಂದು ನಿನ್ನೇ ತಾನೇ ಅಮ್ಮನವರು ಹೇಳಿದರು? ನನ್ನ ರಾಜ, ನಿನ್ನನ್ನು ಹೊಡೆಯಲು ಆ ಪಾಪಿಗೆ ಹೇಗೆ ಮನಸ್ಸು ಬಂದಿತೋ ಕಾಣೆ" ಎಂದು ಅತ್ತು ಅತ್ತು ಕೊರಗಿದಳು. ಅವಳ ಹೃದಯ ಎಡೆಬಿಡದೆ ಹೊಡೆದುಕೊಂಡಿತು. ದೇಹವು ಗಡಗಡನೆ ನಡುಗಿತು. ಬಡವಳಾಗಿದ್ದ ಮಾತ್ರಕ್ಕೆ ಏನೀಗ? ಮಾತೆಯ ಹೃದಯದಲ್ಲಿ ಬಡವಳೆಂದೂ ಶ್ರೀಮಂತಳೆಂದೂ ವ್ಯತ್ಯಾಸವಿರುವುದೇನು?

ಮುನಿಸ್ವಾಮಿ ಬಹಳ ಶೀಘ್ರವಾಗಿ ಹೋಗುತ್ತಲಿದ್ದನು; "ಇಂದು ಬೆಳಿಗ್ಗೆ ಅಪಶಕುನದಂತೆ ಆ ಪಾಪಿಷ್ಠನಾದ ಮಗುವು ಕೈಯನ್ನಿಟ್ಟು ಬಿಟ್ಟನಲ್ಲಾ! ದಾರಿದ್ರ್ಯದ ಕೈತಾಕಿ ಬಿಟ್ಟಿತಲ್ಲಾ. 'ಇಂದು ಒಳ್ಳೆಯ ವ್ಯಾಪಾರವಾಗುವುದೋ ಇಲ್ಲವೋ ಕಾಣೆನಲ್ಲಾ!" ಎಂದು ಅವನ ಮನಸ್ಸು ಚಿಂತಿಸುತ್ತಲಿದ್ದಿತು. ಮರುಕ್ಷಣ "ಏನೆಂದರೂ ಕೂಡ ಮಗುವನ್ನು ಹಾಗೆ ಹೊಡೆದುಬಿಟ್ಟು ತಿರುಗಿನೋಡದೆಬಂದಿರಬಾರದಾಗಿತ್ತು! ಪಾಪ! ಅದು ಏನು ಅಂತಹ ಅಪರಾಧ ಮಾಡಿಬಿಟ್ಟಿತು? ಅದಕ್ಕೆ ಒಂದು ಕೊಟ್ಟು ಬಿಟ್ಟಲ್ಲಿ ಕಮ್ಮಿಯಾಗಿ ಹೋದದ್ದೇನು?" ಎಂದು ಒಂದು ಆಲೋಚನೆ ಹೊಳೆಯಿತು. ಮಕ್ಕಳಿಗೆ ಮುದ್ದು ಕೊಡಬಾರದು. "ಮಹಾರಾಜರ ಮನೆಯ ಮಗುವಾದರೂ ಕೂಡ ಅಡಗಿ ನಡೆಯಬೇಕು." ಎಂದು ಒಂದು ನೆನಪು. 'ಇಷ್ಟೊಂದು ಚಿಕ್ಕ ಪ್ರಾಯದಲ್ಲಿ ಅದಕ್ಕೇನು ಗೊತ್ತುಂಟು? ಅಯ್ಯೋ! ಆ ಪುಟ್ಟ ಮಗು

ವಿನ ಹತ್ತಿರದಲ್ಲಿ ಪ್ರೀತಿ ತೋರಿಸದೆ ಸಾವಿನ ಮಕ್ಕಳಿಗೆ ಮಿಠಾಯಿ ಕೊಡುವೆ ನಲ್ಲಾ!'' ಎಂದಿತು ಒಂದು ಭಾವನೆ.

ಹೀಗೆ ಭಾವನಾತರಂಗಗಳು ಅವನ ಹೃದಯ ಸಮುದ್ರದಲ್ಲಿ ತೋರಿ ತೋರಿ ಮಾಯವಾಗುತ್ತಲಿದ್ದವು. ಒಂದು ಗಲ್ಲಿಯಲ್ಲಿ ನಡೆದು ಹೋಗುತ್ತಿದ್ದನು. ಅವನ ಎದುರಿಗೆ ಅಕಸ್ಮಾತ್ತಾಗಿ ಒಂದು ಮೋಟಾರು ಗಾಡಿ ಅತಿ ವೇಗವಾಗಿ ಬಂದಿತು. ಥಟ್ಟನೆ ಅವನು ಒಂದು ಪಕ್ಕಕ್ಕೆ ಸರಿದನು. ಅಲ್ಲಿದ್ದ ದೊಡ್ಡ ಕಲ್ಲೊಂದು ತಾಕಿ 'ಧಡಂ' ಎಂದು ಕೆಳಗೆ ಕುಸಿದು ಬಿದ್ದನು. ಮೋಟಾರು ಗಾಡಿಯು ಅವನನ್ನು ದಾಟಿಕೊಂಡು ಹೋಗಿಬಿಟ್ಟಿತು ಅವನ ತಲೆಯ ಮೇಲಿದ್ದ ಮಿಠಾಯಿ ತಟ್ಟೆಯು ಸಮೀಪದಲ್ಲಿದ್ದ ಮೋರಿಯಲ್ಲಿ ಬಿದ್ದು ಪೇಟವೊಂದು ಕಡೆಗೂ, ಘಂಟೆ ಒಂದು ಕಡೆಗೂ ಬಿದ್ದುಹೋದವು.

ಮುನಿಸ್ವಾಮಿ ಎದ್ದನು. ಮೋಟಾರಿನವನನ್ನು ಬಾಯಿಗೆ ಬಂದಂತೆ ಬೈದನು. ಪೇಟವನ್ನೂ ಘಂಟೆಯನ್ನೂ ತೆಗೆದನು. ಮಿಠಾಯಿಯ ತಟ್ಟೆಯನ್ನು ನೋಡಿದನು. ಮಿಠಾಯಿ ಅಷ್ಟೂ ಮೋರಿಯಲ್ಲಿ ಬಿದ್ದುಹೋಗಿತ್ತು. ತಟ್ಟೆಯನ್ನು ಮಾತ್ರ ತೆಗೆದುಕೊಂಡನು. ಯಾವ ಕಲ್ಲು ತನ್ನನ್ನು ತಾಕಿತೋ ಅದರ ಮೇಲೆ ಕುಳಿತನು. ದೇಹದಲ್ಲಿ ಘಾಯವೇನೂ ತಗಲಲಿಲ್ಲ. ಹೃದಯಾಂತರಾಳದಲ್ಲಿ ತಗಲಿತು.

ತನ್ನ ಮಗುವಿಗೆ ಒಂದು ಅಣುವಷ್ಟೂ ಕೊಡದೆ ಕಾಪಾಡಲು ಎಣಿಸಿದ ಮಿಠಾಯಿಯಷ್ಟೂ ಅವನ ಕಣ್ಣಮುಂದೆ ಮೋರಿಯಲ್ಲಿ ಬಿದ್ದಿತ್ತು. ಅದರಲ್ಲಿ ಒಂದು ಚೂರು ಕೂಡ ಉಪಯೋಗಕ್ಕೆ ಬರುವಂತಿಲ್ಲ. ಪಿಶಾಚಿಯಂತೆ ಹೊಡೆದು ಮಗುವನ್ನು ಬೀಳಿಸಿಬಿಟ್ಟು ಬಂದಿದ್ದನು ಅವನು; ಇಲ್ಲಿ ಭಗವಂತನು ಅವನನ್ನೇ ಬೀಳಿಸಿಬಿಟ್ಟನು; ಅವನು ಕಾಪಾಡಿ ತಂದ ಮಿಠಾಯಿಯಷ್ಟೂ ಮೋರಿಗೆ ಊಟವಾಯಿತು.

ಅವನು ಪೂರ್ತಿ ಮೃಗವಾಗಿದ್ದಲ್ಲಿ ''ಆ ಪಾತಕನು ಮುಟ್ಟಿದನು; ಹೀಗಾಯಿತು'' ಎಂದು ಅಂದುಕೊಂಡಿರುತ್ತಿದ್ದನು. ಆದರೆ ಅವನಲ್ಲಿ ಮಾನುಷಭಾವನೆಯು ಇನ್ನೂ ಸ್ವಲ್ಪ ಇರಲಾಗಿ ಪಶ್ಚಾತ್ತಾಪವು ಹೃದಯದೊಳಗೆ ಒಂದು ಮೂಲೆಯಲ್ಲಿ ಅಡಗಿಕೊಂಡಿದ್ದಿತು; ತಂದೆತನದ ಪ್ರೇಮವು ಎಲ್ಲಿಯೋ ಮಾಸಿಹೋಗಿ ಇರುವೆಡೆಯು ತಿಳಿಯದಂತೆ ಹುದುಗಿಕೊಂಡಿದ್ದಿತು.

ಆ ಜಲಧಾರೆಯ ತೀರ್ಥದ ದಡದಲ್ಲಿ ತನ್ನನ್ನು ದಂಡಿಸಿದ ಕಲ್ಲಾದ ಪೀಠದಲ್ಲಿ ಕುಳಿತು ಹೃದಯವನ್ನು ಬಿಚ್ಚಿನೋಡಲಾಗಿ ಅವನಿಗೆ ಜ್ಞಾನೋದಯವಾಯಿತು. ಮಾಸಿಹೋಗಿ ಹುದುಗಿದ್ದ ಸ್ವಂತ ಭಾವನಾತರಂಗಗಳು ಅವನಿಗೆ ವಿಶದವಾಗಿ ತೋರಿದವು. ಮನುಷ್ಯಸ್ವಭಾವ, ಪಶ್ಚಾತ್ತಾಪ, ಪ್ರೇಮ ಸಕಲವೂ ಒಂದೊಂದಾಗಿ ಹೊರಹೊರಟುವು.

"ಅಯ್ಯೋ, ನಾನು ಎಷ್ಟೊಂದು ಪಾಪಿಷ್ಠ! ಆ ಎಳೆಯ ಕೂಸನ್ನು ಹೊಡೆದುಬಿಟ್ಟು ಬಂದೆನಲ್ಲಾ; ನಾನು ತಂದ ಮಿಠಾಯಿಯಷ್ಟೂ ಈ ಮೋರಿಯಲ್ಲಿ ಬಿದ್ದುಹೋಯಿತಲ್ಲಾ, ಈಗ ಯಾರಿಗೇನು ಉಪಯೋಗವಾಯಿತು? ಆ ಮಗುವಿಗೆ ಕೊಟ್ಟಿದ್ದರೆ ಅದೊಂದಾದರೂ ಉಪಯೋಗವಾಗುತ್ತಿತ್ತಲ್ಲಾ, ಆ ಮಗುವು ಜೀವಸಹಿತವಾಗಿ ಇರುವುದೋ, ಇಲ್ಲವೋ. ನಾನು ಆತುರದಲ್ಲಿ ಹೊಡೆದುಬಿಟ್ಟೆನು. ತಗಲಬಾರದ ಸ್ಥಳದಲ್ಲಿ ತಗಲಿದ್ದರೆ— ?"

ಈ ರೀತಿಯಾಗಿ ಯೋಚಿಸಿ ನೋಡುತ್ತಿರುವಲ್ಲಿ ಅವನ ಹೃದಯವು ಮಿತಿಮೀರಿದ ದುಃಖಾವೇಶದಿಂದ ತಳಮಳಿಸಿತು. ಕಣ್ಣುಗಳು ಸಜಲವಾದವು. ತಲೆಗೆ ಪಟಪಟನೆ ಹೊಡೆದುಕೊಂಡನು. "ಭಗವಂತನನ್ನು ನಮಸ್ಕರಿಸಿ ಕುಂಕುಮಪ್ರಸಾದವನ್ನು ಹಚ್ಚಿಕೊಂಡೆನಲ್ಲಾ; ಆ ಮಗು ದೇವರ ಸಮಾನವಲ್ಲವೇ? ಅದನ್ನು ಹೊಡೆದುಬಿಟ್ಟು ಬರಬಹುದೇ? ದೇವರು ತಾನೇ ಸಹಿಸಬಲ್ಲನೇ? ಅವನಿಂದ ಸಹಿಸಲಾಗಲಿಲ್ಲ. ಅದರಿಂದಲೇ ಅಷ್ಟನ್ನೂ ಮೋರಿಯಲ್ಲಿ ಬೀಳಿಸಿಬಿಟ್ಟನು. ನನಗೆ ಚೆನ್ನಾಗಿ ಆಗಬೇಕು" ಎಂದು ಅಂದುಕೊಂಡನು.

"ಮುಂಚೆ ಮಗುವಿಗೇನಾಯಿತೆಂದು ನೋಡಬೇಕು" ಎಂಬ ಆವೇಗವು ಹುಟ್ಟಿತು. ರುಮಾಲು ಬಟ್ಟೆಯನ್ನು ಕೊಡವಿ ಭುಜದಮೇಲೆ ಹಾಕಿಕೊಂಡು ಘಂಟೆಯನ್ನೂ, ಬರಿಯ ತಟ್ಟೆಯನ್ನೂ ತೆಗೆದುಕೊಂಡು ಹೊರಟನು.

* * * *

"ಇದೇನು ಇಷ್ಟರೊಳಗೆ ಬಂದುಬಿಟ್ಟೆ? ವ್ಯಾಪಾರ ಮುಗಿಯಿತೇನು?" ಎಂದು ಪ್ರಶ್ನಿಸಿದಳು ತನ್ನ ಮಗುವಿನ ತಾಯಿ. ಅತ್ತೂಅತ್ತೂ ಬಳಲಿಹೋದ ಮಗು ಅವಳ ಮಡಿಲಲ್ಲಿ ಮಲಗಿ ನಿದ್ರಿಸುತ್ತಿದ್ದಿತು. ಆ ಗಲ್ಲದಲ್ಲಿ ಬೆರಳುಗಳ

ಬರೆಗಳೂ ಅದರ ಮೇಲೆ ಹರಿದ ಕಣ್ಣೀರ ಧಾರೆಯ ಕರೆಯೂ ಮುನಿಸ್ವಾಮಿಯ ಕಣ್ಣಿಗೆ ಬಿದ್ದವು.

"ಮಿಠಾಯಿಯೆಲ್ಲವೂ ಚೆಲ್ಲಿಹೋಯಿತು" ಎಂದು ಬಳಲಿದ ಧ್ವನಿಯಲ್ಲಿ ಅವನು ಅಂದನು.

"ಅಯ್ಯೋ, ಈ ಮಗು ಮುಟ್ಟಿದುದರಿಂದ ಬಂದ ವಿಪರೀತವೆಂದು, ಅಲ್ಪಸ್ವಲ್ಪವಿರುವ ಜೀವವನ್ನೂ ತೆಗೆದುಬಿಟ್ಟರೆ ಏನು ಮಾಡುವುದು" ಎಂಬ ಭೀತಿ ಅವಳನ್ನು ಆವರಿಸಿತು. ಆದುದರಿಂದ ಮಗುವನ್ನು ಹೊಡೆದ ವಿಷಯವಾಗಿ ಹೇಳಿ ಅವನ ಕೋಪವನ್ನು ಹೆಚ್ಚಿಸಬಾರದೆಂದು ಯೋಚಿಸಿದವಳಾಗಿ ಮಾತನಾಡದೆ ಸುಮ್ಮನಿದ್ದುಬಿಟ್ಟಳು. ಅವಳ ಮೌನಾವಸ್ಥೆಯು ಅವನ ಹೃದಯಾಂತರಾಳವನ್ನು ಹಾದುಹೊಕ್ಕಿತು. ಮೌನವಾಗಿ ತಟ್ಟೆಯನ್ನು ಕೆಳಗಿಟ್ಟು ಬಳಲಿ ಒಂದು ಮೂಲೆಯಲ್ಲಿ ಕುಳಿತುಕೊಂಡನು. ಅವನಿಗೆ ಏನೊಂದೂ ಮಾತನಾಡಲು ತೋಚಲಿಲ್ಲ; ಅವಳು ಕೂಡ ಮಾತನಾಡುವಷ್ಟು ಧೈರ್ಯಹೊಂದಲಿಲ್ಲ.

ಸ್ವಲ್ಪಕಾಲ ಮೌನ ನೆಲೆಸಿತು. ಹೊರಗಡೆಗೆ ಮೌನವ್ರತಧಾರಿಯಾಗಿದ್ದರೂ ಅವನ ಹೃದಯದೊಳಗೆ ಮಿಂಚೂ, ಗುಡುಗೂ, ಬಿರುಗಾಳಿಯೂ ಹೊಡೆಯುತ್ತಲಿದ್ದವು. ಏನಾದರೂ ಮಾತನಾಡಿಸಿ ಸಮಾಧಾನವನ್ನು ತಂದುಕೊಳ್ಳದಿದ್ದಲ್ಲಿ ಅವನ ಹೃದಯವೇ ಬಿರಿದು ಹೋಗಿಬಿಡುವಂತೆ ವೇದನೆಯುದಿಸಿತು.

"ಮಲಗಿರುವುದೇನು?" ಎಂದು ಕೇಳಿದನು.

"ಹೌದು."

"ಬಹಳ ಅತ್ತುಬಿಟ್ಟಿತೇನು?"

"ಅದೆಲ್ಲ ಏಕೆ ವಿಚಾರಿಸುತ್ತೀ?"

"ಏಟು ಬಲವಾಗಿ ತಗಲಿಬಿಟ್ಟಿತೇನು?"

"ಬಲವಾಗಿದ್ದರೇನು? ಇಲ್ಲದಿದ್ದರೇನು?"

"ಗಾಯಗೀಯ ಆಗಿರುವುದೇ?"

ಪ್ರಶ್ನೆಯ ಮೇಲೆ ಪ್ರಶ್ನೆ ಹಾಕಲು, ಅವಳು ಅಡಗಿಸಿಕೊಂಡಿದ್ದ ಕ್ರೋಧ ಕೋಡಿಯೊಡೆದು ಹೊರಬೀಳಲಾಯಿತು. "ಛೀ, ನೀನೂ ಒಬ್ಬ ಮನುಷ್ಯ

ನಂತೆ ಮಾತನಾಡಲು ಬಂದುಬಿಟ್ಟೆಯಲ್ಲಾ. ಮಗುವನ್ನು ಒಂದೇ ಏಟಿನಲ್ಲಿ ಕೊಂದುಹಾಕಿಬಿಡುವುದು ತಾನೆ! ಈಗ ವಿಚಾರಿಸಲು ಬಂದುಬಿಟ್ಟೆಯಲ್ಲಾ! ದೇವರು ನಿನಗೆ ತಕ್ಕ ಕೂಲಿ ಕೊಡದೆ ಇರಲಾರನು.'' ಅವಳಿಗೆ ಅಷ್ಟರ ಮೇಲೆ ಮಾತನಾಡಲಾಗಲಿಲ್ಲ; ದುಃಖವು ಗಂಟಲನ್ನು ಬಿಗಿಯಿತು, ಗೊಳೋ ಎಂದು ಅಳತೊಡಗಿದಳು.

ಅವನಿಗೂ ಅಳು ಬಂದು ಬಿಟ್ಟಿತು; ಅಡಗಿಸಿಕೊಂಡನು; ``ಇಕೋ, ಇಲ್ಲಿ ನೋಡು; ನಾನು ಹೇಳುವುದನ್ನು ಕೇಳು, ಏನು? ನಿನ್ನನ್ನೇ! ಇನ್ನು ಮೇಲೆ ದೇವರಾಣೆಗೂ ಆ ಮಗುವನ್ನು ನಾನು ಮುಟ್ಟುವುದೇ ಇಲ್ಲ. ಮಹಾ ಪಾಪಿಷ್ಠ. ದೇವರು ನನಗೆ ಸರಿಯಾಗಿ ಮಾಡಿದನು. ಇಕೋ, ಅಳಬೇಡ, ನನಗೂ ಕೂಡ ಅಳುಬರುತ್ತದೆ. ನನ್ನನ್ನು ಆ ಚಪ್ಪಲಿಯಿಂದ ಹೊಡೆ, ಹೊಡೆಸಿಕೊಳ್ಳುತ್ತೇನೆ. ಇನ್ನು ಮೇಲೆ ಇಂತಹ ಬುದ್ಧಿ ಹುಟ್ಟಬೇಡವೆಂದು ಹೇಳಿ ಹೊಡೆ'' ಎಂದು ಅವನೂ ಬಿಕ್ಕತೊಡಗಿದನು. ಈ ಗಲಭೆಯ ನಡುವೆ ಮಗುವು ಕಣ್ಣನ್ನು ತೆರೆದು ನೋಡಿತು.

ಅವನು ಮೇಲಕ್ಕೆ ಎದ್ದನು. ಮಿಠಾಯಿ ಮಡಗಿರುವ ಗೂಡೆಯನ್ನು ತೆರೆದನು. ಕೈತುಂಬ ತೆಗೆದುಕೊಂಡು ಬಂದು ಆ ಮಗುವಿನ ಕೈಯಲ್ಲಿ ಕೊಟ್ಟನು. ``ನನ್ನ ಚಿನ್ನಾ, ಇನ್ನು ಮೇಲೆ ನಿತ್ಯವೂ ನಿನಗೇ ಮೊದಲು ಮಿಠಾಯಿ'' ಎಂದು ಹೇಳಿ ಅದರ ಕೆನ್ನೆಯಲ್ಲಿ ಒಂದು ಮುತ್ತು ಕೊಟ್ಟನು. ಯಾವ ಕೆನ್ನೆಯಲ್ಲಿ ಅವನು ಕೈಯ್ಯಾರೆ ಹೊಡೆದನೋ, ಅದೇ ಕೆನ್ನೆಯಲ್ಲಿ ಅವನ ಆದರ ಮುತ್ತಿರುಕ್ಕಿತು. ಅದನ್ನು ಹಿಂಬಾಲಿಸಿ ಅವಳೂ ಮುದ್ದಿಟ್ಟಳು. ಈ ಎರಡು ಮುತ್ತುಗಳೂ ಔಷಧಿಯಂತೆ ಉಪಕರಿಸಿದ ಆ ಮಗುವಿನ ವದನದಲ್ಲಿ ಒಂದು ಮೆಲು ನಗೆ ಮಾಡಿತು. ಕೈಯಲ್ಲಿದ್ದ ಮಿಠಾಯಿಯನ್ನು ಕಚ್ಚುತ್ತಾ ತಂದೆಯನ್ನೂ ತಾಯಿಯನ್ನೂ ಮರಳಿ ಮರಳಿ ನೋಡಿತು; ಅದೇನು ಹೊಳೆಯಿತೋ ಏನೋ ಗೊತ್ತಿಲ್ಲ; ಪಕ್ಕನೆ ನಕ್ಕಿತು. ``ನಗುವುದನ್ನು ಸೋಡು, ಪೋರ!'' ಎಂದು ಹೇಳುತ್ತಾ ಅವನು ನಿಟ್ಟುಸುರುಗೈದನು.

---

## ಯಾವಾಗ ಬರುವನು ?

"ಅಮ್ಮಾ, ಗೋಪು ಎಲ್ಲಿ ಅಮ್ಮಾ!"

"ಊರಿಗೆ ಹೋಗಿದ್ದಾನೆ, ಚಿನ್ನ!"

"ಯಾವಾಗ ಬರುವನು ?"

"ಎರಡು ದಿವಸಗಳಲ್ಲಿ ಬಂದು ಬಿಡುವನು ಮಗು"

"ಅವನು ಇನ್ನು ಮೇಲೆ ಬರಲಾರನೆಂದು ಕಮಲೆ ಹೇಳುತ್ತಾಳಲ್ಲಾ?"

"ಅವಳ ಮಾತು ಬಿಡು, ಹುಚ್ಚಿ"

"ಅವರೆಲ್ಲರೂ ಏಕೆ ಅಳುತ್ತಾರೆ ?"

"ಗೋಪು ಊರಿಗೆ ಹೋಗಿ ಬಿಟ್ಟನೆಂದು."

"ಹೊದರೇನೀಗ ? ಅವನೇ ಹಿಂದಿರುಗಿ ಬಂದು ಬಿಡುತ್ತಾನಲ್ಲಾ."

"ಬರುತ್ತಾನೆ, ಮಗು."

ತಾಯಿಗೆ ದುಃಖವು ಗಂಟಲು ಬಿಗಿಯಿತು.

"ಯಾಕಮ್ಮಾ ಅಳುತ್ತೀ ? ಅವನು ಬರುವುದಿಲ್ಲವೇನು ?"

ಅವನಿಗೂ ಅಳು ಬಂದಿತು. ಆ ಮಗುವಿಗೆ ಸಮಾಧಾನ ಹೇಳುವುದು ಧರ್ಮಸಂಕಟವಾಗಿ ಮುಗಿಯಿತು. ಯಾವ ರೀತಿಯಾಗಿ ಅವಳು ಸಮಾಧಾನ ಹೇಳುವಳು.

ಶೀನಿ ಮೂರೂವರೆ ವರ್ಷದ ಮಗು. ಆ ಮನೆಯಲ್ಲಿ ರಾಮಚಂದ್ರ ರಾಯರೂ, ಬಾಲಚಂದ್ರರಾಯರೂ ಹತ್ತು ವರ್ಷಗಳಿಂದ ಬಾಡಿಗೆಗೆ ಇದ್ದಾರೆ. ಅವರಿಬ್ಬರಿಗೂ ಯಾವಾಗ ನೋಡಿದರೂ ಆಫೀಸು ಕೆಲಸವೇ. ಮನೆಯಲ್ಲಿ ಅವರನ್ನು ಕಾಣುವುದು ಸಾಧ್ಯವೇ ಇಲ್ಲ. ರಾಮಚಂದ್ರ ರಾಯರ ಮಗು ಶೀನಿ. ಬಾಲಚಂದ್ರರಾಯರ ಮಗು ಗೋಪು. ಆ ಎರಡು

ಕುಟುಂಬದವರೂ ಬಹಳ ಅನ್ಯೋನ್ಯವಾಗಿ ಪಳಗುತ್ತಿದ್ದರಾದರೂ ಆ ಮಕ್ಕಳ ನಡುವೆ ಏರ್ಪಟ್ಟ ಪ್ರೀತಿಯ ದೆಸೆಯಿಂದ ಬಳಕೆಯು ಮತ್ತಷ್ಟು ದೃಢ ಹೊಂದಿದ್ದಿತು.

ಶೀನಿಯು ಯಾವ ಭಕ್ಷ್ಯವನ್ನು ತಿಂದರೂ ಗೋಪುಗೆ ಕೊಡದೆ ತಿನ್ನಲು ಅವನಿಗೆ ಮನಸ್ಸು ಬರುತ್ತಿರಲಿಲ್ಲ. ಮೂರೂವರೆ ವರ್ಷದ ಮಗುವಾದರೂ ಅವನ ಬುದ್ಧಿವಂತಿಕೆಯೂ ಪ್ರೇಮವೂ ಇತರ ಯಾವ ಮಗುವಿನಲ್ಲಿಯೂ ಕಾಣುವುದು ಅಸಾಧ್ಯವೇ ಹೌದು. ಅಪ್ಪನು ತನಗೆಂದು ಕೊಂಡು ತಂದ ಗೊಂಬೆಯನ್ನು ಗೋಪುಗೆ ಕೊಟ್ಟುಬಿಡುವನು. ಯಾವ ವಸ್ತುವನ್ನಾದರೂ ಗೋಪುಗೆ ತೋರಿಸದೆ, ಕೊಡದೆ ಮಡಗಿಕೊಳ್ಳಲು ಅವನ ಮನಸ್ಸು ಒಡಂಬಡುತ್ತಿರಲಿಲ್ಲ.

ಗೋಪುಗೆ ಎರಡೇ ವರ್ಷ ತುಂಬಿತ್ತು. ಅವನಿಗೆ ಜ್ವರ ಬಂದರೆ ಶೀನಿ ಊಟ ಮಾಡಲಾರನು. ಅವನಿಗೆ ಸವರುವ ಔಷಧಿಯನ್ನು ತನಗೂ ಸವರಬೇಕು. ಅವನಿಗೆ ಗಂಜಿ ಕೊಟ್ಟಲ್ಲಿ ಇವನಿಗೂ ಕೊಡಬೇಕು. ಯಾರು ಏನು ಹೇಳಿದರೂ ಕೇಳದೆ ತನ್ನ ಮನೆಯ ಭಕ್ಷ್ಯವನ್ನು ಒಬ್ಬರಿಗೂ ತಿಳಿಯದಂತೆ ಅವನ ಬಾಯಲ್ಲಿಟ್ಟು ಬಂದುಬಿಡುವನು. ಅದರಿಂದ ಒಳ್ಳೆಯದೋ, ಕೆಟ್ಟದೋ, ಅವನಿಗೆ ಅದೊಂದೂ ಅಕ್ಕರೆಯಿಲ್ಲ. ಗೋಪುಗೆ ನ್ಯೂಮೋನಿಯಾ ಜ್ವರ ಕಂಡಿತು. ಶೀನಿಗೆ ಬರಲಿಲ್ಲ ಅಷ್ಟೇ ಹೊರತು ಅವನೂ ಊಟ ಮಾಡಲಿಲ್ಲ. ಗೋಪುಗೆ ಮೈ ಹುಷಾರಿಲ್ಲವೆಂದು ತಿಳಿದಂದಿನಿಂದ ಶೀನಿಗೂ ಮೈ ಕ್ಷೀಣಿಸುತ್ತಾ ಬಂದಿತು. ಮಿಕ್ಕವರೆಲ್ಲರೂ ನಿದ್ರೆಗೆಡುತ್ತಾ ಗೋಪು ಸಮೀಪದಲ್ಲಿರುತ್ತಿದ್ದರು. ಪಾಪ ! ಶೀನಿ ಮಗುವಲ್ಲವೇ ? ತನ್ನ ಕೈಲಾದಷ್ಟು ಹೊತ್ತು ಆ ಹಾಸಿಗೆಯ ಸಮೀಪದಲ್ಲಿಯೇ ಕುಳಿತಿರುತ್ತಿದ್ದನು. "ಶೀನಿ, ನಾಳೆಯ ದಿನ ನಾನು ಮದರಾಸಿಗೆ ಹೋಗುತ್ತೇನೆ. ನೀನು ಬರುತ್ತೀಯಾ" "ನಾನು ಸ್ಕೂಲಿಗೆ ಹೋಗುತ್ತೇನೆ ; ನೀನೂ ಬರುತ್ತೀಯಾ ?" ಎಂದೆಲ್ಲಾ ಅರ್ಥವಿಲ್ಲದ ಹಲವು ಪ್ರಶ್ನೆಗಳು ಗೋಪು ಬಾಯಿಂದ ಹೊರಡುವವು. ಆ ರೀತಿ ಮಾತುಗಳನ್ನು ಕೇಳುವಾಗಲೇ ಏನೂ ಅರಿಯದ ಆ ಮಗು ಶೀನಿಯ ಹೃದಯವು ಒಂದು ಬಗೆಯಾಗಿ ಡಬಡಬನೆ ಹೊಡುಕೊಳ್ಳುತ್ತಲೇ ಇರು

ವುದು. ಯಾವುದೋ ಒಂದು ಆಪತ್ತು ಒದಗೀತೆಂಬ ಸೂಚನೆ ಆ ಹೃದಯ ದಲ್ಲಿ ಬಗೆ ಹರಿಯದ ರೀತಿಯಲ್ಲಿ ಉಂಟಾಯಿತು. ಅದೆಷ್ಟೊಂದು ಹೊತ್ತಿನ ವರೆಗೆ ತಾನೇ ಜಾಗರಣೆ ಮಾಡಬಲ್ಲನು? ಹಾಗೆಯೇ ಮೈ ಮರೆತು ನಿದ್ರೆ ಮಾಡಿಬಿಡುವನು. ಆಗ ಅವನನ್ನು ತೆಗೆದು ಬೇರೊಂದು ಹಾಸಿಗೆಯಲ್ಲಿ ಮಲಗಿಸುವರು. ಆ ಸಮಯದಲ್ಲಿ ಅವನು ಎಚ್ಚೆತ್ತರೂ ಹಟಹಿಡಿದು ಗೋಪು ಸಮೀಪದಲ್ಲಿಯೇ ತಂದುಬಿಡಬೇಕೆಂದು ಅಳುವನು. ಬೆಳಗ್ಗೆ ಎಚ್ಚೆತ್ತು ಏಳುವಾಗ ತನ್ನ ಹಾಸಿಗೆಯ ಸಮೀಪದಲ್ಲಿ ಗೋಪುವನ್ನು ಕಾಣದಿದ್ದಲ್ಲಿ ಅಳುತ್ತಾ ಅವನ ಸಮೀಪಕ್ಕೆ ಓಡಿಬಂದುಬಿಡುವನು.

ಗೋಪು ಜ್ವರ ವೇಗದಲ್ಲಿ ಏನೊಂದೂ ಮಾತನಾಡುತ್ತಿರಲಿಲ್ಲ. ಅವನ ಬಳಲಿಹೋದ ಬಲಹೀನವಾದ ಕಣ್ಣುಗಳು ದುಃಖದಲ್ಲಿ ಲೀನವಾಗಿರುವ ಶೀನಿಯ ಕಣ್ಣುಗಳೊಡನೆ ಮಾತನಾಡುವುವು. ಅವು ತಮ್ಮ ತಮ್ಮೊಳಗೆ ಏನನ್ನು ಮಾತಾಡಿಕೊಂಡವೋ ಯಾರಿಗೆ ಗೊತ್ತುಂಟು? ಆ ಕಣ್ಣುಗಳು ಶೀನಿಯ ಕಣ್ಣುಗುಡ್ಡೆಗಳ ಅಂತರಾಳದಲ್ಲಿ ಪ್ರೇಮವೆಂಬ ರತ್ನವನ್ನು ನೋಡಿರ ಬಹುದು. ಆ ಕಣ್ಣುಗಳು ನಾಲ್ಕೂ ಒಂದುಗೂಡಿ ಮಾತನಾಡಿಕೊಂಡವು; ಅಷ್ಟು ಮಾತ್ರ ನಮ್ಮಿಂದ ಹೇಳಲು ಸಾಧ್ಯ.

ಗೋಪುವಿನ ಜೀವಿತ ಕಾಲವು ಕೊನೆಗಾಣುತ್ತ ಬರುವುದನ್ನು ಎಲ್ಲರೂ ತಿಳಿದುಕೊಂಡರು. ಯಮನ ಬಲೆಯು ಆ ಎಳೆಯ ಚಿಗುರಿನ ಮೇಲೆ ಬೀಸಿರು ವುದೆಂದು ಅರಿತು ಮನೆಯಲ್ಲಿದ್ದವರೆಲ್ಲರೂ ಪರಿತಪಿಸುತ್ತಾ ಅಳತೊಡಗಿದರು.

ಮಗುವಾದ ಶೀನಿಗೆ ಮನಸ್ಸಿನೊಳಗೊಳಗೇ ಒಂದು ಬಗೆಯ ಭೀತಿ; ಗುರುತು ಹಿಡಿಯಲು ಅಸಾಧ್ಯವಾದ ಅಂಧಕಾರದಲ್ಲಿ ದಾರಿ ತಿಳಿಯದೆ ಅಲೆ ದಾಡುವಂತಹ ಭಾವನೆ; ಅವನಿಗೆ ಅಳು ಬರಲಿಲ್ಲ; ಆದರೆ ಅವನ ವದನದ ಪ್ರಫುಲ್ಲತೆ, ಮಾತು, ಚಟುವಟಿಕೆ ಸಕಲವೂ ಮಾಯವಾದವು; ಅವನು ಕಲ್ಲಿ ನಲ್ಲಿ ಕಡೆದ ವಿಗ್ರಹದಂತೆ ಸ್ತಂಭೀಭೂತನಾದನು.

ನಿರೀಕ್ಷಿಸಿದ ಸಮಯ ಸಮೀಪಿಸಿತು. ಗೋಪು ಪ್ರಾಣಪಕ್ಷಿಯು ದೇಹ ವನ್ನು ತೊರೆದು ಬಿಡುಗಡೆ ಹೊಂದಿತು. ಹೆಣವನ್ನು ಹೊತ್ತುಕೊಂಡು ಹೋದರು. ಆಗ ತಾನೆ ಶೀನಿಗೆ ಒಂದು ರೀತಿಯಾದ ಶೋಕ ಉದ್ಭವಿಸಿತು;

"ಗೋಪುವನ್ನು ಎಲ್ಲಿಗೋ ಕೊಂಡೊಯುತ್ತಾರಲ್ಲಾ ; ನಾನೂ ಬರುತ್ತೇನೆ" ಎಂದು ಅವನು ಹಂಬಲಿಸುತ್ತಾ ಪ್ರಲಾಪಿಸಿದನು. ಗೋಪು ಹೋದೆಡೆಗೆ ಅವನೂ ಹೋಗಲಾದೀತೆ? ಅಷ್ಟೊಂದು ಸುಲಭವಾದ ಸ್ಥಳಕ್ಕೆ ಅವನು ಹೋದನೇನು ? ಪಾಪ ! ಮಗುವಿಗೇನು ತಿಳಿದೀತು !

೨

ಹೋದ ಮಗುವಿಗೋಸ್ಕರ ಕೊರಗುವುದಕ್ಕಿಂತಲೂ ಜೀವದಿಂದಿರುವ ಮಗುವಿಗಾಗಿ ಕೊರಗುವುದು ಅಧಿಕವಾಯಿತು. ಶೀನಿ ಗೋಪುವಿನ ಪ್ರಯಾಣವನ್ನು ಕುರಿತು ವಿಚಾರಿಸುವಾಗೆಲ್ಲ ಗೋಪುವಿನ ತಾಯಿಯೂ ಇತರರೂ ದುಃಖವು ಉಕ್ಕಿ ಬರುತ್ತಿರಲಾಗಿ ಅತ್ತು ಕರೆಯುವರು. ಶೀನಿಯ ತಾಯಿಯಾದರೋ, ಅವನ ನಿಷ್ಕಳಂಕವಾದ ಮನಸ್ಸಿನಲ್ಲಿ ಹುಟ್ಟಿದ ಮೊಳಕೆ ಯಾದ ಪ್ರೇಮವೆಂಬ ಬಳ್ಳಿಯು ಈಗ ಹಬ್ಬಿಕೊಳ್ಳಲು ಸಹಾಯಕ ಗಿಡ ವಿಲ್ಲದೆ ಬಾಡಿ ನಿಲ್ಲುವುದನ್ನು ನೆನೆದು ನೆನೆದು ಕೊರಗಿದಳು. ಹುಡುಗನು ಬುದ್ಧಿವಂತನಾದುದರಿಂದಲೂ ಅಪಾಯ ಬಂದಿರುವುದಲ್ಲಾ ಎಂದು ಅವಳು ಮರುಗಿದಳು.

"ಬರುತ್ತಾನೆ, ಬರುತ್ತಾನೆ" ಎಂದು ಹೇಳಿ ಎಷ್ಟು ದಿವಸ ಮೋಸ ಗೊಳಿಸಲಾಗುವುದು? ಶೀನಿಯೂ ಗೋಪುವನ್ನು ಮರೆಯುವಂತೆ ಕಾಣಲಿಲ್ಲ. ಅವನ ಹುರುಪು ಉತ್ಸಾಹವೆಲ್ಲ ಹೋಯಿತು ; ಮುಖದಮೇಲೆ ಶೋಭೆಯಿಲ್ಲ ; ಮಾತಿನಲ್ಲಿ ಸವಿಯಿಲ್ಲ ; ಓಡುವುದರಲ್ಲಿ ಕುಣಿತವಿಲ್ಲ ; ಎಲ್ಲದರಲ್ಲೂ ಒಂದು ತರಹದ ದಣಿವು, ಒಂದು ರೀತಿಯ ಶೋಕ ಭಾವನೆಯ ನೆಳಲೇ ತೋರಿ, ವೃದ್ಧಿಗೊಳ್ಳುತ್ತಿದ್ದಿತು ; ಅವನ ಮೈ ಕ್ಷೀಣಿಸುತ್ತಿದ್ದಿತು.

"ಏನಿದು, ಈ ಮಗು ಸಹ ಹೋಗಿ ಬಿಡುವುದೋ ?" ಎಂದು ಮನೆ ಯವರೆಲ್ಲರೂ ಚಿಂತಿಸಲಾರಂಭಿಸಿದರು.

"ಗೋಪು ಜೊತೆಯಲ್ಲಿ ಪಳಗಿದ ಸ್ಥಳಗಳು, ಗೋಪು ಸಾಮಾನು, ಇವುಗಳಿಂದ ಶೀನಿಗೆ ಅವನ ಜ್ಞಾಪಕ ಉಂಟಾಗುತ್ತದೆ. ಈ ಸ್ಥಳವನ್ನು ಬದಲಾಯಿಸಿದಲ್ಲಿ ಬಹುಶಃ ಇವನಿಗೆ ಆ ನೆನಪು ಮರೆತು ಹೋದರೂ

ಹೋಗಬಹುದು ಎಂದು ಯಾರೋ ಹೇಳಿದರು. ರಾಮಚಂದ್ರರಾಯರೂ ಬಾಲಚಂದ್ರರಾಯರೂ ಈ ವಿಷಯವಾಗಿ ಆಲೋಚಿಸಿ ನೋಡಿದರು.

"ಏನೋ, ನಾನೇ ಪುಣ್ಯಮಾಡಿರಲಿಲ್ಲ. ಅಪೂರ್ವವಾದ ಮಗುವನ್ನು ಬಲಿಕೊಟ್ಟೆ. ನೀವಾದರೂ ಶೀನಿಯನ್ನು ಜಾಗ್ರತೆಯಾಗಿ ನೋಡಿಕೊಳ್ಳಿ. ಅವನೇ ಹೋಗಿಬಿಟ್ಟ; ಇವನನ್ನಾದರೂ ನೋಡುತ್ತಾ ಸಮಾಧಾನ ತಂದು ಕೊಳ್ಳೋಣವೆಂದಿದ್ದೆ; ಅದಕ್ಕೂ ಈಗ ತಡೆಯುಂಟಾಗಿದೆ. ಆದರೆ ದೇವರ ಕೃಪೆಯಿಂದ ಎಲ್ಲಿಯಾದರೂ ಸುಖವಾಗಿದ್ದರೆ ಸಾವಿರ ಸಲ ಬಂದು ನೋಡ ಬಹುದು. ನಾನೊಬ್ಬ ಪಾಪಿಷ್ಠ ; ನಿಮ್ಮಂತಹ ಸಜ್ಜನರನ್ನು ಜೊತೆಗೆ ಇರಿಸಿ ಕೊಳ್ಳಲು ಅದೃಷ್ಟಮಾಡಿಲ್ಲ. ಗೋಪು ತನ್ನ ಜೊತೆಗೆ ಎಲ್ಲವನ್ನೂ ತೆಗೆದೊಯ್ದು ಬಿಟ್ಟ ಎಂದು ತೋರುತ್ತದೆ" ಎಂದು ಹೇಳಿ ಬಾಲಚಂದ್ರರಾಯರು ಗೊಳೋ ಎಂದು ಅತ್ತುಬಿಟ್ಟರು. ಅವರಿಗೆ ಶೀನಿ ಬೇರೆ, ಗೋಪು ಬೇರೆಯೆಂಬ ತಾರ ತಮ್ಯವೇ ಇಲ್ಲ. ಒಂದು ಮಗುವನ್ನು ಯಮನಿಗೆ ಬಲಿಕೊಟ್ಟು ಮತ್ತೊಂದು ಮಗುವನ್ನು ಜೀವಸಹಿತವಾಗಿ ಯಾರಿಗೋ ಕೊಡುವಂತಹ ಭಾವನೆಯೇ ಅವರಿಗೆ ಹುಟ್ಟಿತು.

"ನಾನು ನೋಡಿದೆ; ಬರುಬರುತ್ತಾ ಮಗುವಿನ ದೇಹಸ್ಥಿತಿ ಬಹಳ ಮೋಸವಾಗಿ ಬಿಟ್ಟಿದೆ. ಬೇರೊಂದು ಸ್ಥಳಕ್ಕೆ ಬದಲಾಯಿಸಿದಲ್ಲಿ, ಇವನು ಅಲ್ಲಿರುವ ಮಕ್ಕಳೊಡನೆ ಪಳಗಿದಲ್ಲಿ, ಈ ಜ್ಞಾಪಕವು ಬದಲಾಯಿಸುವುದೋ ಏನೋ! ಆದುದರಿಂದ ಮಕ್ಕಳಿರುವ ಸ್ಥಳವಾಗಿ ನೋಡಿಕೊಂಡು ಹೋಗೋಣವೆಂದು ಯೋಚಿಸುತ್ತಿರುವೆನು" ಎಂದರು ರಾಮಚಂದ್ರ ರಾಯರು.

ಅವರು ಅದೆಷ್ಟೊಂದು ಮನೆಗಳನ್ನೋ ಹೋಗಿ ನೋಡಿದರು. ನೋಡು ವಾಗಲೇ ಆ ಮನೆಯಲ್ಲಿ ಮಕ್ಕಳಿದ್ದಾರೆಯೋ ಎಂದು ವಿಚಾರಿಸುವರು. "ಗೋಪು ಹೋಲುವ ಮುಖಛಾಯೆಯುಳ್ಳ ಮಗುವು ಯಾವ ಮನೆ ಯಲ್ಲಾದರೂ ಇದ್ದಲ್ಲಿ ಶೀನಿಯ ದುಃಖವು ಕಡಿಮೆಯಾಗುವುದಲ್ಲಾ" ಎಂದು ಅವರಿಗೆ ಆಶೆ. ಎಷ್ಟೋ ಮನೆಗಳಲ್ಲಿ ಸಣ್ಣಮಕ್ಕಳೇ ಇರಲಿಲ್ಲ. ಕೆಲವು ಮನೆ ಗಳಲ್ಲಿ "ಮಗುವಿದೆಯೇ" ಎಂದು ಕೇಳುವಾಗಲೇ ಮನೆಯ ಯಜಮಾನರು,

"ಅವೆಲ್ಲವನ್ನೂ ನೀವೇಕೆ ವಿಚಾರಿಸುತ್ತೀರಿ? ಮನೆಯನ್ನು ನೋಡಲು ಬಂದಿರುವಿರೋ? ಅಥವಾ ಮಗುವನ್ನು ಕಾಣಲು ಬಂದಿರುವಿರೋ" ಎಂದು ರೇಗಾಡುವರು. ಅವರುಗಳಿಗೆ ನಮ್ಮ ರಾಮಚಂದ್ರರಾಯರು ಮಗುವನ್ನು ನೋಡುವುದಕ್ಕಾಗಿಯೇ ಬಂದಿರುವರೆಂಬುದು ಹೇಗೆ ತಿಳಿದೀತು?

ಕೊನೆಗೆ ಒಂದು ಮನೆಯನ್ನು ನೋಡಿ ಅರ್ಧಮನಸ್ಕರಾಗಿ ಗೊತ್ತು ಮಾಡಿದರು. ಆ ಮನೆಯಲ್ಲಿ ಎರಡು ಕುಟುಂಬಗಳು ಬಾಡಿಗೆಗೆ ಇರಬಹುದು. ಒಂದು ಪಾರ್ಶ್ವದಲ್ಲಿ ಒಬ್ಬ ಗೃಹಸ್ಥರಿದ್ದರು. ಖಾಲಿಯಿದ್ದ ಸ್ಥಳಕ್ಕೆ ರಾಮಚಂದ್ರರಾಯರು ಬರುವುದಾಗಿ ಹೇಳಿದರು. ಅಲ್ಲಿ ಬಾಡಿಗೆಗೆ ಇದ್ದವರಿಗೆ ಎರಡು ಮಕ್ಕಳು. ಎರಡನೆಯ ಮಗುವಿಗೆ ಎರಡುವರ್ಷ ವಯಸ್ಸು. ಅದರ ಮುಖಛಾಯೆಯು ಸ್ವಲ್ಪ ಸ್ವಲ್ಪ ಗೋಪುವನ್ನು ಹೋಲುತ್ತಿತ್ತು. 'ಇದು ಕೂಡ ಪರಮೇಶ್ವರನ ಕರುಣೆಯೋ' ಎಂದು ಭಾವಿಸಿದವರಾಗಿ ರಾಮಚಂದ್ರರಾಯರು ಆ ಮನೆಗೆ ಮುಂಗಡ ಹಣ ಕೊಟ್ಟುಬಿಟ್ಟರು. "ಆ ಮನೆಯಲ್ಲಿ ಒಂದು ಮೂಲೆಯಲ್ಲಿ ಸೋರುವುದು, ಹೆಗ್ಗಣದ ಉಪದ್ರವ ಸಹ ಉಂಟು; ಮನೆಯ ಮಾಲಿಕರು ಸ್ವಲ್ಪವೂ ಗಮನಿಸುವವರಲ್ಲ. ಬಿಸಿಲು ಮಹಡಿಯಲ್ಲಿ ಹತ್ತಿದರೂ ಸಹ ಅದಕ್ಕೆಂದು ಪ್ರತ್ಯೇಕವಾಗಿ ಬಾಡಿಗೆಯನ್ನು ಕಸಿದು ಕೊಳ್ಳುವಂತಹ ಸಜ್ಜನರು ಅವರು." ಇತ್ಯಾದಿ ಕುಂದು ಕೊರತೆಗಳನ್ನು ಅನೇಕರು ರಾಯರ ಹತ್ತಿರ ಹೇಳಿದರು. ಅಲ್ಲಿ ಬಾಡಿಗೆಗೆ ಇದ್ದವರು ಸಹ "ಏನೋ ಸ್ವಲ್ಪ ಆಫೀಸಿಗೆ ಹತ್ತಿರವಿರುವುದಲ್ಲಾ ಎಂದು ಬಂದೆ. ಈಗ ಯಾಕಪ್ಪಾ ಬಂದೆನೆಂದು ತೋರುತ್ತದೆ, ಬೇರೆಯೊಂದು ಮನೆಯನ್ನು ನೋಡುತ್ತಿದ್ದೇನೆ." ಎಂದರು. ರಾಮಚಂದ್ರರಾಯರು, "ಆಗ ನಾನೂ ಬಂದು ಬಿಡುತ್ತೇನೆ. ಇಬ್ಬರಿಗೂ ಸೇರಿ ಮನೆಯನ್ನು ನೋಡಿ, ಸಾರ್; ಅದುವರೆಗೂ ಇಲ್ಲಿಯೇ ಇರುತ್ತೇನೆ" ಎಂದು ಹೇಳಿಬಿಟ್ಟರು.

ಬಂದ ಹೊಸದರಲ್ಲಿ ಶೀನಿ ಆ ಮನೆಯ ಮಗುವಿನೊಡನೆ ಆಟವಾಡಿ ನೋಡಿದನು. ಅವನ ತಾಯಿತಂದೆಯರು ಕೂಡ ಆ ಮಗುವೇ ಗೋಪುವೆಂದು ಅವನಿಗೆ ಹೇಳಿದರು. ಆದರೆ ಆ ಮಗುವಿನ ಕಣ್ಣುಗಳಲ್ಲಿ ಶೀನಿಗೆ ಸುಖಾಗಮನ ಬಯಸುವಂತಹ ಪ್ರೀತ್ಯಾದರವು ತೋರಲಿಲ್ಲ; ಅದರ ಧ್ವನಿ

ಯಲ್ಲಿ ಶೀನಿಯನ್ನು ತನ್ನ ಹೃದಯದೊಡನೆ ಬೆರೆಸಿಕೊಳ್ಳುವಂತಹ ಆಕರ್ಷಣ ಶಕ್ತಿ ಇರಲಿಲ್ಲ.

"ಗೋಪುವಿರುವ ಸ್ಥಳಕ್ಕೆ ನಾವು ಕೊನೆಗೆ ಬಂದುಬಿಟ್ಟೆವಲ್ಲಾ" ಎಂದು ತಂದೆಯು ಹೇಳುವರು.

"ಇಲ್ಲಾ ಅಪ್ಪಾ; ಗೋಪು ನನ್ನೊಡನೆ ಮಾತನಾಡುವನಲ್ಲಾ! ನನ್ನೊಡನೆ ಆಟವಾಡುವನಲ್ಲಾ! ಇವನೇನೂ ಮಾಡುವುದಿಲ್ಲಾ" ಎಂದು ಮಗು ಹೇಳುವನು.

"ಅಗೋ, ನಗುತ್ತಾನಲ್ಲಾ, ಮಾತನಾಡುತ್ತಾನಲ್ಲಾ. ಗೋಪುವೇ ಇವನು" ಎಂದು ಪುನಃ ಹೇಳುವರು ತಂದೆ.

"ಇಲ್ಲವೇ ಇಲ್ಲ, ಅಪ್ಪಾ; ನಿಜವಾಗಿಯೂ ಇವನು ಗೋಪುವಲ್ಲ. ಇವನು ಕಿಟ್ಟಿ, ಕಿಟ್ಟಿಯೆಂದಲ್ಲವೇ ಇವನನ್ನು ಕರೆಯುತ್ತಾರೆ!"

ಅಪ್ಪರ ಮೇಲೆ ಅವರಿಂದ ಮಾತನಾಡಲಾಗಲಿಲ್ಲ. ಆದರೂ ಅವರಿಗೆ ಆಗ ಒಂದು ಯೋಜನೆ ಹೊಳೆಯಿತು. "ಯಾಕೆ ಹಾಗೆ ಮಾಡಬಾರದು? ಹಾಗೆ ಮಾಡಿಬಿಟ್ಟಲ್ಲಿ ಈ ಆಕ್ಷೇಪಣೆಗೆ ದಾರಿಯಿಲ್ಲವಲ್ಲಾ?" ಎಂದು ಯೋಚಿಸಿದರು. ತಮ್ಮ ಜೊತೆಯಲ್ಲಿ ಆ ಮನೆಯಲ್ಲಿ ವಾಸಿಸುತ್ತಿರುವವರ ಸಮೀಪದಲ್ಲಿ ಹೋಗಿ "ಸಾರ್, ಒಂದು ಸಣ್ಣ ವಿಜ್ಞಾಪನೆ. ನೀವು ಹಾಗೆ ಮಾಡಿದಲ್ಲಿ ನನಗೆ ಕೋಟ್ಯಂತರ ಸರ್ವಸ್ ಕೊಟ್ಟಂತಹ ಪುಣ್ಯ ಲಭಿಸುವುದು. ನನ್ನ ಮಗುವನ್ನು ಕಾಪಾಡಿದ ಪುಣ್ಯ ನಿಮಗುಂಟು" ಎಂದರು.

"ನಿಮ್ಮ ಮಗುವಿಗೇನಾಯಿತು? ನಾನೇನನ್ನು ಮಾಡಬೇಕು?"

"ಒಂದೂ ಇಲ್ಲ; ನಿಮ್ಮ ಮಗುವನ್ನು ಇನ್ನು ಮೇಲೆ ಎಲ್ಲರೂ ಗೋಪುವೆಂದು ಕರೆಯೋಣವೇ?"

"ಇದೇನಯ್ಯಾ, ವಿಚಿತ್ರವಾಗಿದೆ! ಹೆಸರನ್ನು ಯಾರಾದರೂ ಬದಲಾಯಿಸುವರೇನು? ನಮ್ಮ ತಾತಂದಿರ ಹೆಸರು ಕೃಷ್ಣಮೂರ್ತಿಯೆಂದು; ಅದನ್ನು ಅವನಿಗೆ ಇಟ್ಟಿರುವೆವು. ನೀವು ಬದಲಾಯಿಸಲು ಹೇಳುವಿರಲ್ಲಾ."

"ನಿಮ್ಮನ್ನು ಅನಾವಶ್ಯಕವಾಗಿ ಬದಲಾಯಿಸುವಂತೆ ಹೇಳಲಿಲ್ಲ.

ನೀವಿಟ್ಟ ಹೆಸರು ಇದ್ದಂತೆಯೇ ಇರಲಿ ; ಕರೆಯುವಾಗ ಮಾತ್ರ ಗೋಪುವೆಂದು ಕರೆಯೋಣವೇ ? ''

"ಏಕೆ ಹಾಗೆ ಕರೆಯಬೇಕು ? ಹುಚ್ಚು ಯೋಚನೆಯಲ್ಲವೇ ನಿಮ್ಮದು ! ''

ರಾಮಚಂದ್ರರಾಯರು, ತಾವು ತಮ್ಮ ಮಗುವಿಗೆ ಕಿಟ್ಟುವನ್ನು ಗೋಪುವಂತೆ ತೋರಿಸಿಕೊಡಲು ಈ ಉಪಾಯವನ್ನು ಮಾಡಲು ಎಣಿಸಿರುವುದಾಗಿ ಹೇಳಿ, ಗೋಪುವಿನ ಅಲ್ಪಾಯುಸ್ಸಿನ ಚರಿತ್ರೆಯನ್ನು ತಿಳಿಸಿದರು. ಆಗ ಆ ಮನುಷ್ಯನಿಗುಂಟಾದ ಕೋಪಾವೇಶವನ್ನು ನೋಡಬೇಕಲ್ಲಾ ! ಓಹೋ ! ಏನು ಮನುಷ್ಯರಪ್ಪಾ ನೀವು? ಅದಾವುದೋ ಒಂದು ಅಲ್ಪಾಯುಸ್ಸಿನ ಮಗುವಂತೆ! ಅದರ ಹೆಸರನ್ನು ಇದಕ್ಕೆ ಇಡಹೇಳುವಿರಲ್ಲಾ! ಸಾವಿರಾರು ದೇವರಿಗೆ ಹರಕೆ ಮಾಡಿಕೊಂಡು ನಮಗೆ ಇದೊಂದು ಗಂಡು ಮಗು ಹುಟ್ಟಿರುವುದು.; ಇದನ್ನು ನಾನು ಎಷಯೊಳಗಿಟ್ಟು ಕಣ್ಮಣಿಯಂತೆ ಕಾಪಾಡುತ್ತಿದ್ದೇನೆ. ಯಾವುದೋ ಒಬ್ಬ ಹುಚ್ಚು ಮುಂಡೆಯಂತೆ ಬಂದು ಏನೇನೋ ಕನವರಿಸುವಿರಲ್ಲಾ ! ಸಾಕು ಮಾಡಿ ನಿಮ್ಮ ಸಾಹಸವ ಮಾತನ್ನು. ಇಂದೇ ಈ ಮನೆಯನ್ನು ಖಾಲಿ ಮಾಡಬೇಕು. ನಿಮ್ಮ ಹುಡುಗನಿಗೇ ಈ ಅಲ್ಪಾಯುಸ್ಸಿನ ಹುಡುಗನ ಹೆಸರನ್ನಿಡಿ, ನೋಡೋಣ.'' ಎಂದು ಅವರು ಗುಡುಗಿನಂತೆ ರೇಗಿಬಿದ್ದರು. ರಾಮಚಂದ್ರರಾಯರು ನಡುಗಿದರು. ಬಾವಿಯನ್ನು ತೋಡಲು ಹೋಗಿ ಅದರಿಂದ ಭೂತವು ಹೊರಟಂತಾಯಿತು !

೩

ಬೇರೆ ಯಾವ ದಾರಿಯೂ ತೋರದೆ ರಾಮಚಂದ್ರರಾಯರು ಮತ್ತೊಂದು ಮನೆಗೆ ಬಂದರು. ಒಬ್ಬರ ಮನೋಭಾವನೆಗಳನ್ನು ಇದ್ದದ್ದು ಇದ್ದ ಹಾಗೆಯೇ ಮತ್ತೊಬ್ಬರು ತಿಳಿದುಕೊಳ್ಳುವುದು ಅಸಾಧ್ಯವೇ ಹೌದು. ಕಿಟ್ಟುವಿನ ತಂದೆಗೆ ಅದೇಕೆ ಅಷ್ಟೊಂದು ಕೋಪ ಬಂದಿತೆಂದು ರಾಮಚಂದ್ರರಾಯರಿಗೆ ಅರ್ಥವಾಗಲೇ ಇಲ್ಲ.

ಶೀನಿಯು ದಿನ ದಿನಕ್ಕೆ ಕ್ಷೀಣಿಸುತ್ತಲೇ ಬಂದನು. ಸಾಲದುದಕ್ಕೆ ಅವನಿಗ ಹಳದೀ ಕಾಮಾಲೆ ರೋಗ ತಲೆದೋರಿತು.

ಗೋಪು ತಂದೆಯುವರಾದ ಬಾಲಚಂದ್ರರಾಯರು, ರಾಮಚಂದ್ರ ರಾಯರು ತಮ್ಮ ಮನೆಯನ್ನು ಬಿಟ್ಟು ಹೋದಾಗ ಮಿತಿ ಮೀರಿದ ದುಃಖ ವನ್ನು ಅನುಭವಿಸಿದರು. ಅವರು ಶೇಷಾದ್ರಿಪುರದಲ್ಲಿ ಇದ್ದರು. ರಾಮ ಚಂದ್ರರಾಯರು ಬಸವನಗುಡಿಯಲ್ಲಿ ಬಾಡಿಗೆಗೆ ಇದ್ದರು. ಆಫೀಸಿನ ತಾಪ ತ್ರಯದ ನಡುವೆ ಅಷ್ಟೊಂದು ದೂರ ಹೋಗಿ ಆಡಿಗಡಿಗೆ ನೋಡಿ ಬರುವು ದೆಂದರೆ ಸುಲಭವಾದ ಕಾರ್ಯವೇ? ಎನೋ ಕೆಲವು ಸಾರಿ ಬಂದರು. ಅನಂತರದಲ್ಲಿ ಬರುವುದನ್ನು ನಿಲ್ಲಿಸಿಬಿಟ್ಟರು. ಈ ರೀತಿಯಾಗಿ ಒಂದೂವರೆ ವರ್ಷ ಕಾಲ ಕಳೆಯಿತು. ಶೀನಿಗೆ ಗೋಪುವಿನ ಜ್ಞಾಪಕವು ಮರೆತುಹೋಗಲೇ ಇಲ್ಲ.

"ಅಮ್ಮಾ, ಗೋಪು ಯಾವಾಗ ಬರುವನಮ್ಮಾ?"

"ಬರುವನು ಮಗು"

"ಇನ್ನೂ ಬರಲಿಲ್ಲವಲ್ಲೇ, ಅಮ್ಮಾ?"

"ಬಂದುಬಿಡುತ್ತಾನೆ, ಮಗು"

ಮಾತೆಗೆ ದುಃಖವು ಗಂಟಲನ್ನು ಬಿಗಿಯುವುದು. ಇದು ದಿನವಹಿ ನಡೆಯುವದಾಗಿ ಬಿಟ್ಟಿತು.

ಶೀನಿಯ ಪ್ರಶ್ನೆಯಲ್ಲಿ ಶೋಕವು ಮೂರ್ತಿಮತ್ತಾಗಿ ಧ್ವನಿಸುವುದು; ತಾಯಿಯ ಉತ್ತರದಲ್ಲಿ ಪರಿತಾಪವು ಪ್ರತಿಫಲಿಸುವುದು. ಅವನು ಬರುವನೇ? ಬರುವನು, ಬರುವನು ಎಂದು ಇದಿರುನೋಡುತ್ತಿರುವ ಶೀನು ಹೃದಯದಲ್ಲಿ ಅದೆಷ್ಟೊಂದು ಆಹ್ಲಾದ? ಅದನ್ನು ಭಗವಂತನು ನಿಶ್ಚಯವಾಗಿಯೂ ಮನ ಗಂಡಿದ್ದರೆ, ಆ ಎಳೆಯ ಮಗುವಿನ ಹೃದಯಬಲ್ಲಿ ಕಿವಿಯನ್ನಿಟ್ಟು ಕೇಳಿದ್ದರೆ, ಆ ಪರಿತಾಪವನ್ನು ಕಂಡು ಸಹಿಸದವರಾಗಿ ಗೋಪುವನ್ನು ಪುನಃ ಬದುಕಿಸಿರು ವರು. ಅವರು ಕರುಣಾನಿಧಿಯೆಂಬ ಮಾತು ವಾಸ್ತವವಾದರೆ ಅದೇ ಕೆಲಸ ನಡೆಯುತ್ತಲಿತ್ತು. ಅದು ನಡೆಯಲೂ ಇಲ್ಲ; ಅವರು ಕರುಣಾನಿಧಿಯಲ್ಲವೆ? ಈ ವಿಷಯಗಳೆಲ್ಲವೂ ಅನಾದಿಕಾಲದಿಂದಲೂ ಬಿಡಿಸಲಾಗದೇ ಇದ್ದು ಬರುವ ಗಂಟುಗಳು.

ಹದಿನೆಂಟು ತಿಂಗಳಿಂದ ಆ ವಿರಹವೇದನೆಯ ಜ್ವಾಲೆಯಲ್ಲಿ ಶೀನಿ ಬೆಂದು ಬಾಡಿ ಬಳಲಿಹೋದನು. ಅವನ ತಂದೆಯುವರು ಆ ಮಗುವಿನ

ಮನೋವೇದನೆಯನ್ನು ಹೋಗಲಾಡಿಸಲು ಎಷ್ಟೆಷ್ಟೋ ಪ್ರಯತ್ನಪಟ್ಟರು, ಆಗಲಿಲ್ಲ.

ಅಂದೇನೋ ಅವರೂ ಅವರ ಪತ್ನಿಯೂ ಜ್ಞಾಪಿಸಿಕೊಂಡರು. "ಈ ಮಗುವಿಗೆ ಗೋಪುವಿದ್ದ ಸ್ಥಳವನ್ನಾದರೂ ಪುನಃ ಒಂದು ಸಲ ತೋರಿಸೋಣ. ಇಷ್ಟರಮೇಲೆ ನಮ್ಮ ಯತ್ನದಲ್ಲೇನೂ ಇಲ್ಲ" ಎಂದು ಮಾತನಾಡಿಕೊಂಡರು. ಇಬ್ಬರೂ ಹೋಗುವುದೇ, ಬೇಡವೇ ಎಂದು ಯೋಚಿಸಿದರು. ಅನಂತರ, "ಅವರೂ ಬಂದು ಹೋಗಿ ಬಹಳ ದಿವಸಗಳಾದುವು. ಹೋಗಿ ನೋಡಿ ಕೊಂಡು ಬರೋಣ. ನಾನು ಆ ಮನೆಯನ್ನು ಬಿಟ್ಟು ಬಂದಮೇಲೆ ಒಂದು ಸಲವೂ ಅಲ್ಲಿಗೆ ಹೋಗಲಿಲ್ಲ. ಹೊರಡು, ಹೋಗೋಣ. ಅಲ್ಲಿಯೇ ಪಕ್ಕದ ಮನೆಯ ಅಜ್ಜಿಗೆ ಕಾಮಾಲೆಗೆ ಮಂತ್ರಿಸಲು ಬರುತ್ತದೆ; ಮಂತ್ರಿಸಿಕೊಂಡು ಬರೋಣ"ವೆಂದು ರಾಮಚಂದ್ರರಾಯರು ಹೇಳಲು, ಅವರ ಪತ್ನಿ ಮಗುವನ್ನು ಕರೆದುಕೊಂಡು ಹೊರಟಳು.

ಅಂದು ಭಾನುವಾರ. ಬಾಲಚಂದ್ರರಾಯರು ಮನೆಯಲ್ಲಿದ್ದರು. ರಾಮಚಂದ್ರರಾಯರನ್ನು ಬರಮಾಡಿಕೊಂಡು ಉಪಚರಿಸಿದರು. ಮಗು ಶೀನಿ ಆ ಮನೆಯನ್ನು ಕಂಡೊಡನೆಯೇ ಬಿರಬಿರನೆ ಒಳಗೆ ಓಡಿಹೋದನು. ಅಲ್ಲಿ ನಡುಮನೆಯಲ್ಲಿ ಕುಳಿತಿದ್ದ ಮಗುವಿನ ಸಮೀಪದಲ್ಲಿ ಹೋಗಿ, "ಗೋಪು! ಗೋಪು! ಇಲ್ಲಿದ್ದೀಯಾ! ಊರಿಂದ ಯಾವಾಗ ಬಂದೆ? ಅಪ್ಪನು ನನಗೇಕೆ ಹೇಳಲೇ ಇಲ್ಲ" ಎಂದು ಅದನ್ನು ಬಲವಾಗಿ ಆಲಿಂಗಿಸಿಕೊಂಡನು.

ಹೊರಗೆ ರಾಮಚಂದ್ರರಾಯರು ಬಾಲಚಂದ್ರರಾಯರೊಡನೆ ಮಾತಾಡುತ್ತಲಿರುವಾಗ ಶೀನಿಯು ಮಗುವನ್ನು ಎಳೆದುಕೊಂಡು ಹೊರಗೆ ಬಂದನು. "ಅಪ್ಪಾ, ಇಲ್ಲಿ ನೋಡು, ಗೋಪು!" ಎಂದು ಕೂಗಿದನು.

ರಾಮಚಂದ್ರರಾಯರು ದಿಗ್ಭ್ರಮೆ ಹೊಂದಿದರು. ಶೀನಿಯ ಜೊತೆಯಲ್ಲಿ ನಿಂತಿದ್ದ ಮಗುವು ಬಹುವಾಗಿ ಗೋಪುವಿನಂತೆಯೇ ಇದ್ದಿತು. ಕ್ಷಣಮಾತ್ರದಲ್ಲಿ ಅವರಿಗೆ ನಿಜಾಂಶ ತಿಳಿದುಹೋಯಿತು. ತಾವು ಆ ಮನೆಯನ್ನು ಬಿಟ್ಟುಹೋಗುವಾಗ ಗೋಪು ತಾಯಿಯು ಗರ್ಭಿಣಿಯಾಗಿದ್ದುದು ಆಗ ನೆನಪಿಗೆ ಬಂದಿತು.

"ನಿಮಗೆ ಮಗು ಹುಟ್ಟಿದ ವಿಷಯವನ್ನು ನೀವು ನನಗೆ ಹೇಳಲೇ ಇಲ್ಲ ವಲ್ಲ; ನಾನು ಪುಣ್ಯಾಹವಾಚನಕ್ಕೆ ಬಂದುಬಿಡುವೆನೆಂದೇ?" ಎಂದು ಕೇಳಿ ದರು ರಾಮಚಂದ್ರರಾಯರು.

"ಏನೋ ಹುಟ್ಟಿತು; ನಿಮಗೆ ಹೇಳಲು ಮರೆತುಹೋದೆ. ನಿಮ್ಮನ್ನು ನಾನು ಅಧಿಕವಾಗಿ ಸಂಧಿಸುವುದೇ ಇಲ್ಲವಲ್ಲಾ, ಏನೋ ದೇವರ ದಯದಿಂದ ಈ ಮಗುವಾದರೂ ಸುಖವಾಗಿರಲಿ, ಅನಂತರ ತಿಳಿಯದೆಯೇ ಹೋಗಿಬಿಡು ವುದೇನು ಎಂದು ಸುಮ್ಮನಾದೆ."

"ಎಲ್ಲವೂ ಗೋಪುವಿನ ಪಡಿಯಚ್ಚು! ಅವನ ಹಾಗೆಯೇ ಇರುವ ನಲ್ಲಾ."

"ಹೌದು, ಎಲ್ಲರೂ ಹಾಗೆಯೇ ಅನ್ನುತ್ತಾರೆ."

ಇತರರು ಹೇಳುವುದರಿಂದೇನು? ಆ ಮಗುವಿನೊಡನೆ ಶೀನಿ ಕುಣಿ ದಾಡುತ್ತಾ ಪುಳಕಿತನಾದನು. ಅವನ ಕಣ್ಣುಗಳಲ್ಲಿ ಹಿಂದೆ ಅಳಿದುಹೋಗಿದ್ದ ಪ್ರಕಾಶವು ಪುನಃ ಶೋಭಿಸಿತು. ದೇಹಾದ್ಯಂತವೂ ಒಂದು ರೀತಿಯ ಕುತೂ ಹಲ. ಆ ಕೊಂಡಾಟವನ್ನು ಅರ್ಧಘಂಟೆಯ ಕಾಲ ಸಾವಧಾನವಾಗಿ ಗಮ ನಿಸಿ ನೋಡಿದರು, ರಾಮಚಂದ್ರರಾಯರು. "ಸರಿ, ಔಷಧಿ ದೊರಕಿಬಿಟ್ಟಿತು" ಎಂದು ಅವರು ನಿರ್ಧರಿಸಿಕೊಂಡರು.

"ಮಗುವಿಗೇನೆಂದು ನಾಮಕರಣಮಾಡಿರುವಿರಿ? ಎಂದು ಕೇಳಿದರು ರಾಮಚಂದ್ರರಾಯರು.

"ಹೆಸರೊಂದೂ ಇಟ್ಟಿಲ್ಲ; ಕಾಲಕ್ರಮೇಣ ನೋಡಿಕೊಳ್ಳೋಣ ವೆಂದಿದ್ದುಬಿಟ್ಟೆ. ಗುಂಡಣ್ಣ, ಕುಪ್ಪಣ್ಣ ಎಂದು ಏನೇನೋ ಹೆಸರಿಟ್ಟು ಕರೆಯುತ್ತಾರೆ."

"ಅದಿರಲಿ, ನಮ್ಮ ಶೀನಿಯೂ ಆ ಮಗುವೂ ಆಟವಾಡುವುದನ್ನು ಸ್ವಲ್ಪ ನೋಡಿ! ಹಳೆಯ ಗೋಪುವೇ ಬಂದಿರುವನೆಂದು ಅವನು ಭಾವಿಸಿರು ವನು. ಅವನು ಇನ್ನುಮೇಲೆ ಖಾಯಿಲೆ ಕಳೆದು ಬದುಕಿಕೊಳ್ಳುವನೆಂದು ನನಗೆ ನಂಬಿಕೆ ಉಂಟಾಗಿದೆ. ನಾನೂ ಇಲ್ಲಿಗೇ ವಾಸಿಸಲು ಬಂದು ಬಿಡೋಣ ವೆಂದು ಯೋಚಿಸುತ್ತೇನೆ."

"ಹಾಗಾದರೆ ಬಹಳ ಸಂತೋಷ!" ಎಂದು ಹಿಗ್ಗಿದರು ಬಾಲಚಂದ್ರ ರಾಯರು.

"ಆದರೆ—ಒಂದು ವಿಷಯ; ಹೇಳಲೇನು? ಹೇಳಬಹುದೇ?"

"ಯಾಕೆ ಅಷ್ಟೊಂದು ಅಂಜಿಕೆ? ಸಂಕೋಚಪಡದೆ ಹೇಳಬಹುದಲ್ಲ."

"ಹೇಳಬಹುದೇ? ನೀವು ಕೋಪಿಸಿಕೊಳ್ಳುವುದಿಲ್ಲವಲ್ಲಾ?"

"ಹೇಳಿ."

"ಈ ಮಗುವನ್ನು ಗೋಪು ಎಂದೇ ಕರೆಯುವಿರಾ?"

ಹೀಗೆ ಹೇಳುತ್ತಿರುವಾಗ ರಾಮಚಂದ್ರರಾಯರ ಕಣ್ಣುಗಳಿಂದ ಗಳಗಳನೆ ಕಣ್ಣೀರು ಹೊಮ್ಮಿ ಸುರಿಯಲಾರಂಭಿಸಿತು. ಬಾಲಚಂದ್ರರಾಯರು, "ಲೋ, ಗೋಪು!" ಎಂದು ಹೆಸರು ಹಿಡಿದು ಕರೆಯುತ್ತಾ ಆ ಮಕ್ಕಳಿರುವೆಡೆಗೆ ಓಡಿದರು; ಅವರಿಬ್ಬರನ್ನೂ ಎತ್ತಿಕೊಂಡು ಬಂದರು. "ಇಕೋ ನಿಮ್ಮ ಗೋಪು; ಇವನು ನಮ್ಮ ಶೀನಿ" ಎಂದು ಇಬ್ಬರ ಕೆನ್ನೆಗಳಲ್ಲಿಯೂ ಮುತ್ತಿಟ್ಟರು.

ಶೀನಿಗೆ ಈಗ ಗೋಪು ಬಂದುಬಿಟ್ಟನು; "ಅಂದಿನಿಂದ ಯಾವಾಗ ಬರುವನಮ್ಮಾ?" ಎಂಬ ಪ್ರಶ್ನೆಯನ್ನು ಅವನು ಮರೆತುಹೋದನು.

# ವಿಷ ಪರೀಕ್ಷೆ

ತಿರುವೇಂಗಡ ಮೊದಲಿಯಾರ್ರವರು ನೆನೆದುಕೊಂಡೊಡನೆಯೇ ಯಾವ ಕಾರ್ಯವನ್ನು ಬೇಕಾದರೂ ಕೂಡ ಸಾಧಿಸಿಕೊಳ್ಳುವಂತಹ ಚಾತುರ್ಯವುಳ್ಳವರು. ಯಾವ ಕೆಲಸವನ್ನು ಕೂಡ ಮುಂಚಿನ ಅಭ್ಯಾಸವಿಲ್ಲದೆಯೇ ಅಚ್ಚುಕಟ್ಟಾಗಿ ಮಾಡಿಬಿಡುವರು. ಅವರು ಮಾಡುವ ಪ್ರಯತ್ನಗಳೆಲ್ಲವೂ ಸಾಮಾನ್ಯವಾದುವಲ್ಲ. ಕೈಯಲ್ಲೊಂದು ಬಿಡಿಗಾಸೂ ಇಲ್ಲದೆ ಜಿಲ್ಲಾ ಬೋರ್ಡಿನಲ್ಲಿ ಇಪ್ಪತ್ತು ಸಾವಿರ ರೂಪಾಯಿಗಳಿಗೆ ಒಂದು ಕಂಟ್ರಾಕ್ಟ್ ಹಿಡಿದು ಬಿಡುವರು. ಏನೋ ಗಡಿಬಿಡಿ ಮಾಡಿ ಕೆಲಸವನ್ನು ನೆರವೇರಿಸಿ ಬಿಡುವರು.

ಒಂದು ದೊಡ್ಡ ಕಂಪೆನಿಯನ್ನು ಪ್ರಾರಂಭಿಸುವರು. ನೂರು ರೂಪಾಯಿಗಳನ್ನು ಸಂಪಾದಿಸಿ ಪತ್ರಿಕೆಗಳಲ್ಲಿ ಆಡಂಬರವಾಗಿ ಜಾಹೀರಾತನ್ನು ಪ್ರಕಟಗೊಳಿಸುವರು. ಒಬ್ಬ ಮ್ಯಾನೇಜರ್, ಒಬ್ಬ ಕಾರ್ಯದರ್ಶಿ, ಕೆಲವು ಗುಮಾಸ್ತರುಗಳು ಎಲ್ಲರೂ ಆವಶ್ಯಕವೆಂದೂ ಮುಂಗಡವಾಗಿ ಪ್ರತಿಯೊಬ್ಬರೂ ಇಷ್ಟಿಷ್ಟು ಹಣ ಕಟ್ಟಬೇಕೆಂದೂ ಪ್ರಕಟನೆ ಹೊರಡಿಸಿ ಬಿಡುವರು. ಒಂದು ವಾರದೊಳಗಾಗಿಯೇ ಶ್ರೀಮಂತ ಮನೆತನಗಳ ಅಳಿಯಂದಿರುಗಳು ಮುಂಗಡ ಹಣದ ಸಹಿತವಾಗಿ ಬಂದು ಗುಂಪುಗೂಡುವರು. ಆ ಮುಂಗಡ ಹಣವನ್ನೆಲ್ಲಾ ಶೇಖರಿಸಿಟ್ಟುಕೊಂಡು ಕಂಪೆನಿಯನ್ನು ಪ್ರಾರಂಭಿಸುವರು.

ಅವರ ದಾರಿಯೇ ಒಂದು ಪ್ರತ್ಯೇಕ ರೀತಿಯಾದದ್ದು. "ಇಂತಹ ರೀತಿಯಲ್ಲೇ ಸಾಮರ್ಥ್ಯವನ್ನು ಹೂಡುತ್ತಾರೆ" ಎಂದು ಯಾರೊಬ್ಬರಿಗೂ ತಿಳಿಯದು. ಅದೊಂದು ದೊಡ್ಡ ಮಾಯಾಜಾಲವಾಗಿರುವುದು. ಹೇಗೋ ಕಂಪೆನಿಯು ಪ್ರಾರಂಭವಾದ ನಾಲ್ಕನೆಯ ತಿಂಗಳಲ್ಲಿ ಕೆಲಸಗಾರರ ಮುಂಗಡ ಹಣವನ್ನು ಬ್ಯಾಂಕಿನಲ್ಲಿ ಹಾಕಿಬಿಟ್ಟು ಮೂರು ಸಾವಿರ ರೂಪಾಯಿಯ ಲಾಭದ ಹಣವನ್ನು ಕೈಯಲ್ಲಿ ಕುಲುಕುತ್ತಿರುವರು.

ಇಂದ್ರಜಾಲ, ಮಹೇಂದ್ರಜಾಲ ಎಂದು ಬೇರೆ ಯಾವುದಾವುದನ್ನೋ ಹೇಳುವ ವಾಡಿಕೆ; ಅದೆಲ್ಲ ಸುಳ್ಳು. ಮೊದಲಿಯಾರ್ರವರು ಮಾಡುವುದೇ ನಿಜವಾದ ಇಂದ್ರಜಾಲ. ಇಂದು ರಾತ್ರಿ ಹಣವಿಲ್ಲದೆ ಎರಡು ಬಾಳೆಯ ಹಣ್ಣುಗಳನ್ನು ಸುಲಿದು ಬಾಯಲ್ಲಿ ಹಾಕಿಕೊಂಡು ಮಲಗುವರು. ನಾಲ್ಕನೆಯ ತಿಂಗಳಲ್ಲಿ ಸಾವಿರಗಟ್ಟಳೆಯಾಗಿ ಅವರ ಕೈಯಲ್ಲಿ ಹಣ ಚೆಲ್ಲಾಡುವುದು.

ಈ ರೀತಿಯಲ್ಲಿ ನಡೆದುಬರುತ್ತದೆ ಅವರ ಕಂಪೆನಿಯೆಂದರೆ, 'ಇಂದು ಅವರು ಎಷ್ಟು ಲಕ್ಷಗಳು ಕೂಡಿಸಿಟ್ಟಿದ್ದಾರೆ?' ಎಂಬ ಪ್ರಶ್ನೆಯನ್ನಲ್ಲವೇ ನೀವು ಕೇಳುವಿರಿ ?

"ಬುದ್ಧೀ, ಭಿಕ್ಷೆ!" ಎಂದರೆ ಅವರ ಕೈಯಲ್ಲಿ ಬಿಡಿಕಾಸೂ ಕಾಲಾಣೆಯ ಬಿಲ್ಲೆಯೂ ಬರಲಾರವು. ಬೆಳ್ಳಿಯ ನಾಣ್ಯವನ್ನೇ ತೆಗೆದು ಬಿಸುಡುವರು. ಸೋದರ ಮಾವನ ಮಗನಿಗೆ ಪುತ್ರ ಜನನವಾಯಿತೆಂದು ಪತ್ರಬರಲಿ, ಹನ್ನೊಂದನೆಯ ದಿವಸ ಪುಣ್ಯಾಹವಾಚನಕ್ಕೆ ಮೋಟಾರಿನಲ್ಲಿ ಹೋಗಿ ನಿಲ್ಲುವರು. ತೊಟ್ಲು, ಮಗುವಿಗೆ ಚಿನ್ನದ ಬಳೆಗಳು, ತಾಯಿಗೆ ಸೀರೆ, ಕುಪ್ಪುಸ ಎಲ್ಲವೂ ಸೇರಿ ಸುಮಾರು ಎರಡು ಸಾವಿರ ರೂಪಾಯಿಗಳಿಗೆ ಮುಟ್ಟಿಸಿ ಬಿಡುವರು. ಯಾವ ರೀತಿಯಾಗಿ ಸಂಪಾದಿಸುತ್ತಾರೋ ಅದೇ ರೀತಿ ಖರ್ಚು ಮಾಡುವುದರಲ್ಲಿಯೂ ಧೀರರು. ಹಾಗಾದರೆ ಕೈಯಲ್ಲಿ ದುಡ್ಡು ಮಿಗುವುದು ಹೇಗೆ? ಅವರ ಕೈಯಲ್ಲಿ ಹಣವಿದೆಯೆಂದು ನಂಬುವುದಕ್ಕಾಗುತ್ತಲೇ ಇರಲಿಲ್ಲ.

೪

ಲಕ್ಷ್ಮಿ ಮೊದಲಿಯಾರರ ಪ್ರಿಯಪುತ್ರಿ. ಅವಳ ಸೌಂದರ್ಯವು ಆಕರ್ಷಣೀಯವಾಗಿತ್ತು. ಪೊನ್ನಂಬಲಂ ಮೇಲೆ ಅತ್ಯಂತ ಪ್ರೇಮವನ್ನಿಟ್ಟಿದ್ದಳು.

ಎಳೆತನದಿಂದ ಒಂದುಗೂಡಿ ಬೆಳೆದವರು ಅವರು. ಲಕ್ಷ್ಮಿಯು ಮೊಟ್ಟಮೊದಲು ಇಂಗ್ಲೀಷ್ ಪಾಠವನ್ನು ಕಲಿತದ್ದು ಪೊನ್ನಂಬಲಂ ಹತ್ತಿರದಲ್ಲೇ. ಅವರಿಬ್ಬರ ನಡುವೆ ಹುಟ್ಟಿಬೆಳೆದ ಪ್ರೇಮಬಂಧನವು ಯಾರಿಂದಲೂ ಮುರಿಯಲು ಸಾಧ್ಯವಿಲ್ಲವಾಗಿತ್ತು. ವಿವಾಹವಾಗುವ ನೆಂಟಸ್ತಿಕೆಯನ್ನು

ಹೊಂದಿರುವರಾದುದರಿಂದ ಯಾರೊಬ್ಬರೂ ಅವರ ಆಟದಲ್ಲಿ ತಡೆಯಾಗಿ ಬಂದು ನಿಲ್ಲಲಿಲ್ಲ.

ಲಕ್ಷ್ಮಿ ಪೊನ್ನಂಬಲಂಅನ್ನು ಮುಂಚಿನಂತೆ ನೋಡಿ ಸಲಿಗೆಯಿಂದ ವರ್ತಿಸಲು ಸಾಧ್ಯವಿಲ್ಲದೆ ಹೋಯಿತು. "ಏನೆಂದರೂ ಕೂಡ ವಿವಾಹವಾದ ಮೇಲಲ್ಲವೇ ಗಂಡಹೆಂಡಿರು! ಪ್ರಾಯ ಬಂದ ಒಬ್ಬ ಹುಡುಗಿಯನ್ನು ಪುರುಷನೊಬ್ಬನೊಡನೆ ಸಲಿಗೆಯಿಂದ ವರ್ತಿಸಲು ಬಿಡಬಹುದೆ?" ಎಂದು ಒಬ್ಬ ಮುದುಕಿ ಅಂದುಬಿಟ್ಟಲ್ಲಿ ಮಾನ ಹೋಗಿಬಿಡುವುದಲ್ಲವೇ? ಬುದ್ಧಿಶಾಲಿಯಾದ ಲಕ್ಷ್ಮಿಯು ಪ್ರೇಮವೆಂಬ ಕೆರೆಯನ್ನೂ ಪೊನ್ನಂಬಲಂ ಪ್ರೇಮವೆಂಬ ಕೆರೆಯನ್ನೂ ನಡುವೆ ವಿವಾಹವೆಂಬ ಕಾಲುವೆಯೊಂದನ್ನು ಅಗೆದು ಕೂಡಿಸಿಬಿಡಬೇಕು. ಬಹುಶಃ ವಿವಾಹವು ಜರುಗಿಬಿಡಬಹುದಲ್ಲವೆ? ನೆಂಟಸ್ತಿಕೆಗೆ ನೆಂಟಸ್ತಿಕೆ; ಬಹುದಿನಗಳಿಂದ ತಡೆಯಿಲ್ಲದೆ ಪಳಗಿದವರು; ವಿವಾಹವಾಗುವ ಪ್ರಾಯ. ಇಷ್ಟಲ್ಲದೆ ಬೇರೆ ಏನು ಆವಶ್ಯಕ? ಲಕ್ಷ್ಮಿ ತನ್ನ ಪ್ರಾಣವಲ್ಲಭನನ್ನು ಲೋಕವರಿಯುವಂತೆ ಪ್ರಾಣೇಶನಾಗಿ ಮಾಡಿಕೊಳ್ಳುವ ಕಾಲವನ್ನು ಪ್ರತಿಯೊಂದು ದಿವಸವೂ ಇದಿರು ನೋಡುತ್ತಿದ್ದಳು. ಅವರು ಮುಂದೆ ಜರುಗಲಿರುವ ಬದುಕಿನಲ್ಲಿ ಈಜುತ್ತಿದ್ದರು.

ಲಕ್ಷ್ಮಿಯ ತಾಯಿತಂದೆಯರು ಇಷ್ಟರಮೇಲೆ ಅವಳಿಗೆ ಮದುವೆ ಮಾಡಿಬಿಡಬೇಕೆಂದು ನಿರ್ಧರಿಸಿದರು. ವಿವಾಹದಲ್ಲಿ ಕೊನೆಯ ಪಕ್ಷ ಹತ್ತುಸಾವಿರ ರೂಪಾಯಿಗಳಾದರೂ ಖರ್ಚುಮಾಡಬೇಕೆಂಬುದು ಮೊದಲಿಯಾರರ ಇಚ್ಛೆ. ಹೋದ ವರ್ಷವೇ ಯಾವುದೋ ಒಂದು ಮಾತು ಬಂದಾಗ, ಪೊನ್ನಂಬಲಂ ಹತ್ತಿರದಲ್ಲೇ ಅವರು, "ಲಕ್ಷ್ಮಿಗೆ ಮದುವೆಮಾಡಿದಲ್ಲಿ ಕೊನೆಯಪಕ್ಷ ಇಪ್ಪತ್ತು ಸಾವಿರ ರೂಪಾಯಿಯಾದರೂ ಖರ್ಚುಮಾಡುವೆನು. ಅಳಿಯಂದಿರು "ಹಾ" ಎಂದು ಬಾಯಿ ಬಿಡಬೇಕು" ಎಂದು ಹೇಳಿದ್ದರು. ಈ ವರ್ಷ ಅವರ ಉದಾರವಾದ ಕೈಚೀಲದಲ್ಲಿ ಮೂರು ಸಾವಿರ ಚಿಲ್ಲರೇ ರೂಪಾಯಿಗಳು ಮಾತ್ರವೇ ಬಾಕಿ ಇತ್ತು. ಅವರು ಹೇಳಿದ ಇಪ್ಪತ್ತು ಸಾವಿರಕ್ಕೆ ಎಲ್ಲಿಗೆ ಹೋಗುವುದು? ಹತ್ತು ಸಾವಿರಕ್ಕೇ ದಾರಿಯಿಲ್ಲವಲ್ಲಾ. ಆದರೂ ಅವರು ಹೆದರಲಿಲ್ಲ. ಹೇಗಾದರೂ ಪುಸಲಾಯಿಸಿ ಎಂಟು ಸಾವಿರವನ್ನು ಶೇಖರಿಸಿಬಿಡಬಹುದೆಂಬ ಧೈರ್ಯವು ಅವರಿಗಿತ್ತು. ಹಣ ಶೇಖರವಾಗಲೆಂದು ಕಾದು

ಕೊಂಡಿರಲು ಅವರಿಗೆ ಮನಸ್ಸು ಬರಲಿಲ್ಲ. ಹಣವು ತಮ್ಮ ದಯೆಯನ್ನು ಇದಿರು ನೋಡಬೇಕೇ ಹೊರತು ತಾವು ಹಣದ ದಾಕ್ಷಿಣ್ಯವನ್ನು ನಿರೀಕ್ಷಿಸುವುದೇ ಇಲ್ಲವೆಂದು ಅವರು ಪದೇ ಪದೇ ಸಿಂಹನಾದ ಮಾಡುತ್ತಲಿದ್ದರು. ಪೊನ್ನಂಬಲಂ ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿಬಿಟ್ಟನು; ಲಕ್ಷ್ಮಿಗೂ ಹದಿನಾರು ವರ್ಷ ತುಂಬಿತು. ಇನ್ನು ಸಾವಕಾಶಮಾಡುವುದು ದೋಷವೆಂದು ಅವರಿಗೆ ತೋರಿತು.

೩

"ಅವನಿರಲಿ ಭಿಕ್ಷುಕ ಹುಡುಗ!" ಎಂದು ಹೇಳುತ್ತ ಕಾಲನ್ನು ಬೀಸಿ ಚಪ್ಪಲಿಯನ್ನು ಬಿಸಾಡಿದರು ಮೊದಲಿಯಾರ್ರು. ಅವರ ಆಗಮನವನ್ನು ಅವರ ಪತ್ನಿಯೂ ಲಕ್ಷ್ಮಿಯೂ ಆತುರದೊಡನೆ ಇದಿರು ನೋಡುತ್ತಲಿದ್ದರು. ಆ ದಿನ ಪೊನ್ನಂಬಲಂ ಮನೆಗೆ ಹೋಗಿ ಮದುವೆಯ ವಿಷಯವಾಗಿ ಮಾತನಾಡಿಕೊಂಡು ಬರಲು ಮೊದಲಿಯಾರರು ಹೋಗಿದ್ದರು. ಅವರು ಮನೆಗೆ ಹಿಂತಿರುಗಿ ಬಂದಾಗ ಅವರು ನುಡಿದ ಕೋಪದ ವಾರ್ತೆಗಳು ಲಕ್ಷ್ಮಿಗೂ ಅವಳ ತಾಯಿಗೂ ಇತ್ಯರ್ಥವಾಗಲಿಲ್ಲ.

''ಏನು ವಿಷಯ? ಹೋದ ಕಾರ್ಯವೇನಾಯಿತೆಂದು ಹೇಳದೆ ಏನನ್ನೋ ಮಾನಾಡುತ್ತಿರುವಿರಲ್ಲಾ ?'' ಎಂದು ಕೇಳಿದಳು ಮೊದಲಿಯಾರರ ಪತ್ನಿ.

''ಕೆಲಸವೇನಾಯಿತೇ ? ಸ್ವಲ್ಪ ಓದಿ ಬಿಟ್ಟರೆ ಗವರ್ನರ್ ಹುದ್ದೆಯೇ ದೊರಕಿಬಿಟ್ಟಂತೆ ಕನಸು ಕಾಣುವುದು! ಸರಿಯಾಗಿ ಬದುಕಲು ತಿಳಿಯದ ಹುಡುಗನಿಗೆ ಅದೆಂತಹ ಗರ್ವ! ಇಷ್ಟರ ಮೇಲೆ ಇವನು ಉದ್ಯೋಗಕ್ಕೆ ಸೇರಿ ಸಂಪಾದಿಸಿ ಒಂದು ಒಳ್ಳೆಯ ಸ್ಥಿತಿಗೆ ಬಂದ ಮೇಲೆಯಲ್ಲವೇ ಇವನನ್ನು ನಂಬಿ ಹೆಣ್ಣು ಕೊಡಬಹುದು? ಏನೋ ಪರಿಚಯದ ದಾಕ್ಷಿಣ್ಯಕ್ಕಾಗಿ ಹೋಗಿ ಕೇಳಿದರೆ, ತನ್ನ ಬುದ್ಧಿ ಸಾಮರ್ಥ್ಯವನ್ನು ನನ್ನ ಹತ್ತಿರದಲ್ಲೇ ತೋರಿಸುತ್ತಾನೆ."

''ಏನು ಇದು! ನೀವು ಯಾರನ್ನು ಕುರಿತು ಏನನ್ನು ಹೇಳುತ್ತಿರುವಿರೆಂದು ಹೇಳಬಾರದೇ ?''

"ಯಾರನ್ನು ಕುರಿತೆ? ಎಲ್ಲವೂ ಆ ಮಹಾರಾಜಶ್ರೀ ಪೊನ್ನಂಬಲಂ ಮೊದಲಿಯಾರ್ ಬಿ. ಎ. ಇರುವರಲ್ಲಾ, ಅವರನ್ನು ಕುರಿತೇ."

"ಸಮೀಪದಲ್ಲಿಯೇ ಮರೆಯಲ್ಲಿ ನಿಂತು ಈ ಸಂಭಾಷಣೆಯನ್ನು ಕೇಳುತ್ತಿದ್ದ ಲಕ್ಷ್ಮಿಗೆ ವಿಷಯವೇನೆಂದು ಇತ್ಯರ್ಥವಾಗದೆ ಹೊಟ್ಟೆಯೊಳಗೆ ಸಂಕಟವೇರ್ಪಟ್ಟಿತು."

"ಯಾಕೆ ಅಷ್ಟೊಂದು ಕೋಪಿಸಿಕೊಂಡಿರುವಿರಿ? ಅವನು ಮದುವೆಯಾಗುವುದಿಲ್ಲವೆಂದು ಹೇಳಿಬಿಟ್ಟನೇನು?" ಎಂದಳು ಮೊದಲಿಯಾರರ ಪತ್ನಿ.

"ಹಾಗೆ ಒಂದು ತೀರ್ಮಾನವಾಗಿ ಹೇಳಿಬಿಟ್ಟಲ್ಲಿ ಅವನ ಗೌರವಕ್ಕೆ ಭಂಗ ಏರ್ಪಡುವುದಲ್ಲವೇ? ಅವನಿಗೆ ನಮ್ಮ ಲಕ್ಷ್ಮಿಗಿಂತ ಬೇರೊಬ್ಬ ದೇವಲೋಕದ ರಂಭೆ ಅಷ್ಟೈಶ್ವರ್ಯಗಳೊಡನೆ ಬರುವುದು ತಪ್ಪಿಹೋಗುವುದೇನು! ಯಾವಾಗಲೂ ಯಾರನ್ನೂ ಸಂಪೂರ್ಣವಾಗಿ ನಂಬಬಾರದು."

"ಅವನೇನು ಅಂತಹ ನಂಬಿಕೆಯ ದ್ರೋಹವನ್ನು ಮಾಡಿಬಿಟ್ಟನು?"

"ಇಪ್ಪತ್ತೈದು ಸಾವಿರಕ್ಕೆ ಒಂದು ಪಟ್ಟಿಯನ್ನು ಕೊಟ್ಟಿರುವನು. ಅವೆಲ್ಲವನ್ನೂ ಕೊಟ್ಟ ಹೊರತು ವಿವಾಹವಾಗಲಾರನಂತೆ! ಈ ಇಪ್ಪತ್ತೈದು ಸಾವಿರವಿದ್ದ ಪಕ್ಷದಲ್ಲಿ ಕೇವಲ ಒಂದು ಕತ್ತೆ ಸಹ ಹುಡುಗಿಯನ್ನು ತಲೆಯ ಮೇಲೆ ಇಟ್ಟುಕೊಂಡು ಕುಣಿದಾಡುವುದಲ್ಲಾ! ಎಲ್ಲವೂ ಓದಿಬಿಟ್ಟೆನೆಂಬ ಗರ್ವ!"

"ವಿವರವಾಗಿ ವಿಷಯವನ್ನು ಹೇಳಬಾರದೇ?"

"ಇನ್ನೂ ಏನನ್ನು ವಿವರಿಸಬೇಕು? ಇಲ್ಲಿಂದ ಅವರ ಮನೆಗೆ ಹೋದೆ. ನಿನ್ನ ಅಣ್ಣನ ಹತ್ತಿರದಲ್ಲಿ ಮಾತನಾಡಿದೆ. ನನಗೊಂದೂ ಗೊತ್ತಿಲ್ಲ. ಈ ಕಾಲದಲ್ಲಿ ಮಾತನಾಡಿದೆ. ನನಗೊಂದೂ ಗೊತ್ತಿಲ್ಲ. ಈ ಕಾಲದಲ್ಲಿ ಈ ತರಹದ ವಿಷಯಗಳಲ್ಲಿ ಹುಡುಗರ ಇಷ್ಟದಂತೆಯೇ ಬಿಟ್ಟುಬಿಡುವುದೇ ಮೇಲು" ಎಂದು ಯೋಗ್ಯವಾಗಿ ನುಡಿದುಬಿಟ್ಟರು. ಅವನೊಡನೆ ಮಾತನಾಡಿದೆನು.

ಹಲ್ಲು ಬಿಟ್ಟನು; ಉಪಚಾರವಾಗಿ ಹೇಳಿದನು. ಹತ್ತುಸಾವಿರ ರೂಪಾಯಿಗಳು ನಗದಾಗಿ ಕೊಡಬೇಕಂತೆ; ವಜ್ರದ ಹತ್ತಕಡಕು ಅದೂ ಇದೂ ಎಂದು ಎಲ್ಲವನ್ನೂ ಹತ್ತುಸಾವಿರಕ್ಕೆ ಮಾಡಬೇಕಂತೆ. ನೋಡಿದೆಯೇನೇ ನಿಮ್ಮಣ್ಣನ ಮನೆಯ ಸಂಬಂಧವನ್ನು! ನಮ್ಮದೇ ತಪ್ಪು. ಬೇರೆ ಯಾರನ್ನಾದರೂ ಹೋಗಿ ಕೇಳಿದ್ದರೆ ಸಲಾಂ ಹಾಕಿಕೊಂಡು ಮದುವೆಮಾಡಿಕೊಳ್ಳುತ್ತಿದ್ದರು.''

''ನೀವೇ ಹತ್ತು ಸಾವಿರಕ್ಕೆ ಮಾಡುವುದಾಗಿ ಮುಂಚೆಯೇ ಹೇಳಿರುವಿರಲ್ಲಾ.''

''ಲಕ್ಷ ರೂಪಾಯಿಗೂ ಮಾಡುವೆನು. ಅದು ನನ್ನ ಇಷ್ಟ. ಇವನೇನು ಕೇಳುವುದು? ಹಣವನ್ನೇ ಇವನು ಮದುವೆಯಾಗುತ್ತಾನೆಯೇ? ಇವನ ದುರಾಸೆ ಎಷ್ಟೆಂದು ಈಗಲ್ಲವೇ ಗೊತ್ತಾಗುತ್ತದೆ?''

''ಸರಿ, ಈಗೇನು ಮಾಡುತ್ತೀರಿ?''

''ಏನು ಮಾಡುವುದು? ನಾನಾಗಿ ಹೋಗಿ ಒಬ್ಬರ ಮಾತಿಗೆ ಅಡಗಿ ನಡೆಯುವುದೆಂಬ ಮಾತು ಈ ಜನ್ಮದಲ್ಲಿ ನಡೆಯಲಾರದು. ಅಷ್ಟೊಂದು ರೂಪಾಯಿಯು ಸಹ ಈಗ ನನ್ನಲ್ಲಿ ಇಲ್ಲ. ಇಷ್ಟೊಂದು ಹಣದಾಶೆ ಹಿಡಿದವನು ಮದುವೆಯಾದ ಮೇಲೂ ನಮ್ಮ ಹುಡುಗಿಯನ್ನು ಚೆನ್ನಾಗಿ ಇಟ್ಟುಕೊಳ್ಳುವನೆಂದು ನನಗೆ ತೋರಲಿಲ್ಲ. ಮುಟ್ಟಿದ್ದಕ್ಕೆಲ್ಲಾ ''ಹಣ ಕೇಳಿ ತಾ'' ಎಂದು ಹುಡುಗಿಯನ್ನು ಅಟ್ಟಿದರೂ ಅಟ್ಟಿಬಿಡುವನು.''

"ಹಾಗೆಲ್ಲಾ ಅನ್ನಬೇಡಿ. ತಕ್ಷಣ ವಿಷಯವನ್ನು ಹೀಗೆ ಪ್ರತಿಭಟಿಸಿ ಬಿಟ್ಟು ಬಿಟ್ಟಲ್ಲಿ, ಬಳಿಕ ಸರಿಪಡಿಸಲಾಗುವುದಿಲ್ಲ. ಲಕ್ಷ್ಮಿಗೋಸ್ಕರವಾಗಿಯಾದರೂ ಯೋಚಿಸಬೇಡವೆ? ಇವಳ ಸಂತೋಷವನ್ನು ನಾವು ಕೆಡಿಸಬಹುದೆ?''

ಕಂಬದ ಹಿಂದಿನಿಂದ ಬಿಕ್ಕಿ ಬಿಕ್ಕಿ ಅಳುವ ಶಬ್ದ ಕೇಳಿ ಬಂದಿತು. ಲಕ್ಷ್ಮಿಯೇ ಹಾಗೆ ಅತ್ತಳೆಂಬುದನ್ನು ತಿಳಿಸಬೇಕಾದ ಆವಶ್ಯಕವಿಲ್ಲ. ಮೊದಲಿಯಾರರಿಗೆ ಕೋಪ ಸ್ವಲ್ಪ ಇಳಿಯಿತು.

''ಛಟ್, ಹುಚ್ಚಿ! ಯಾತಕ್ಕೆ ಹೀಗೆ ಅಳುತ್ತೀಯೆ? ನಮಗೆ ನಿನ್ನ ಆನಂದದ ಬದುಕಿನಲ್ಲಿ ಯೋಚನೆ ಇಲ್ಲವೇನು?'' ಎಂದರು ಮೊದಲಿಯಾರ್ರು.

ಅನಂತರ ಕೆಲವು ದಿವಸಗಳು ವ್ಯಾಪಾರದ ಮಾತುಕತೆ ನಡೆಯಿತು. ಪೊನ್ನಂಬಲಂ ಇಪ್ಪತ್ತೈದು ಸಾವಿರದಿಂದ ಹದಿನೈದು ಸಾವಿರಕ್ಕೆ ಇಳಿದು ಬಂದನು. ಆದರೂ ಅವನ ಬಿಗುಮಾನವು ಕ್ರಮೇಣ ಅಧಿಕವಾಯಿತೇ ಹೊರತು ಕಡಿಮೆಯಾಗಲೇ ಇಲ್ಲ. ಮೊದಲಿಯಾರರಿಗೆ ಮಿತಿ ಮೀರಿದ ಕೋಪವುಂಟಾಯಿತು; "ಛೀ! ಇಷ್ಟರ ಮೇಲೆ ಈ ಹುಡುಗನನ್ನು ಅಂಗಲಾಚುವುದಿಲ್ಲ." ಎಂದು ನಿರ್ಧರಿಸಿಕೊಂಡರು.

ಪಾಪ! ಲಕ್ಷ್ಮಿಯ ಜೀವವು ಮಾತ್ರ ದಿನ ದಿನಕ್ಕೆ ಚಿಂತೆಯಿಂದ ಬಳಲಿ ಸವೆದು ಹೋಗುತ್ತಲಿದ್ದಿತು. ತನ್ನ ಪ್ರಿಯನು ಈ ರೀತಿಯಾಗಿ ನಡೆದುಕೊಳ್ಳುತ್ತಿರುವುದನ್ನು ಅರಿತು ಬಹಳ ವ್ಯಸನಗೊಂಡಳು; ಅವನ ಪಾದಗಳಲ್ಲಿ ಹೋಗಿ ಬಿದ್ದು ಅಂಗಲಾಚಿ ಬೇಡೋಣವೆಂದು ಯೋಚಿಸಿದಳು; ಒಂದು ಪತ್ರವನ್ನಾದರೂ ಯಾರ ಮೂಲಕವಾದರೂ ಕಳುಹಿಸೋಣವೆಂದು ನೋಡಿದಳು. ಸಾಧ್ಯವಾಗಲಿಲ್ಲ.

ತಿರುವೇಂಗಡ ಮೊದಲಿಯಾರರಿಗೆ ಆ ವರ್ಷದ ಕೊನೆಯಲ್ಲಿ ಇಪ್ಪತ್ತು ಸಾವಿರ ರೂಪಾಯಿಗಳ ಲಾಭದೊರಕಿತು. "ಕೈಯಲ್ಲಿ ಹಣವಿದೆಯಲ್ಲಾ; ಅವನಿಗೆ ಸಂತುಷ್ಟಿಯಾಗಿ ಎಲ್ಲವನ್ನೂ ಮಾಡಿಕೊಟ್ಟು ಮದುವೆ ಮಾಡಿಬಿಡಿ. ಲಕ್ಷ್ಮಿ ನಮಗೆ ಉಳಿಯಬೇಕೆಂಬ ಇಷ್ಟವಿದ್ದರೆ ಈ ಕಾರ್ಯವನ್ನು ನೆರವೇರಿಸಿ. ಅವಳ ದೇಹಸ್ಥಿತಿ ತೀರ ಕೆಟ್ಟುಹೋಗಿದೆ. ದಿನದಿನಕ್ಕೆ ಸವೆಯುತ್ತಿದ್ದಾಳೆ. ಹೆಣ್ಣುಮಕ್ಕಳ ಮನಸ್ಸನ್ನು ನೋಯಿಸುವುದು ಮಹಾ ಪಾಪಕರವಾದದ್ದು" ಎಂದು ತಮ್ಮ ಪತ್ನಿಯು ನುಡಿಯುವುದನ್ನು ಕೇಳಿದ ಮೊದಲಿಯಾರರು ಸುಮ್ಮನೆ ಹೊರಟುಹೋದರು. ಪೊನ್ನಂಬಲಂ ತಮ್ಮ ಅಭಿಪ್ರಾಯಕ್ಕೆ ಜಗ್ಗಿದ ಹೊರತು ವಿವಾಹವನ್ನು ಜರುಗಿಸುವುದಿಲ್ಲವೆಂದು ಅವರು ಒಂದು ಹಠಮಾರಿತನದ ತೀರ್ಮಾನವನ್ನು ಮಾಡಿಕೊಂಡಿದ್ದರು.

೪

ಎರಡು ವರ್ಷ ಕಳೆದವು. ಅಷ್ಟರೊಳಗೆ ಅದೆಷ್ಟೊಂದು ಬದಲಾವಣೆಗಳು! ದುರಾಶೆಯ ನಿಮಿತ್ತವಾಗಿ ಮೊದಲಿಯಾರರು ದೊಡ್ಡದೊಂದು ಬ್ಯಾಂಕನ್ನು ಸ್ಥಾಪಿಸಿ ನಷ್ಟಹೊಂದಿದರು. ಸ್ವಂತ ಕಂಪೆನಿ ಸಹ ನೆಲೆಗೆಟ್ಟು

ಚೆಲ್ಲಾಪಿಲ್ಲಿಯಾಯಿತು. ಎರಡನೆಯ ವರ್ಷದ ಪ್ರಾರಂಭದಲ್ಲಿ, ಆರು ತಿಂಗಳೊಳಗಾಗಿಯೇ ಅವರ ಉನ್ನತ ಪದವಿಯು ನೆಲಮಟ್ಟವಾಯಿತು. ಒಂಬತ್ತು ತಿಂಗಳ ಬಳಿಕ ಹಳೆಯ ಒಡವೆಗಳನ್ನು ಮಾರಿ ಊಟ ಮಾಡಲಾರಂಭಿಸಿದರು. ಹನ್ನೆರಡನೆಯ ತಿಂಗಳಲ್ಲಿ ಸೀರೆಗಳನ್ನು ಮಾರತೊಡಗಿದರು.

ಲಕ್ಷ್ಮಿ ಒಣಗಿಹೋದ ಗೆಣಸಿನಂತಾದಳು. ಅವಳ ಆಶೆಯೆಲ್ಲ ಹಾಳಾಗಿ, ತನಗೆ ಮುಂದಿನ ಪರಿಹಾರ ಮರಣವೊಂದು ಮಾತ್ರವೇ ಎಂಬ ಸ್ಥಿತಿಗೆ ಅವಳು ಮುಟ್ಟಿದಳು. ಅವಳ ಪ್ರೇಮ ತೊಟ್ಟುಕೊಳ್ಳದ ವಜ್ರದೋಪಾದಿಯಲ್ಲಿ ತಿರಸ್ಕರಿಸಲ್ಪಟ್ಟು ಬಿದ್ದಿತ್ತು; ಜೀವವಿರುವವರೆಗೆ ಅದು ಕರಗದು. ವಜ್ರ ಹೇಗೆ ಕರಗಲಾದೀತು?

ಅಂದೇ ಅವರ ಬದುಕಿನ ರೀತಿಯಲ್ಲಿ ಬದಲಾವಣೆಯುಂಟಾಯಿತು. ಅದುವರೆಗೂ ಊಟಮಾಡುತ್ತಿದ್ದ ಅಕ್ಕಿಯ ಅನ್ನವನ್ನು ತೊರೆದು ರಾಗಿಯ ಮುದ್ದೆಯನ್ನು ಉಣ್ಣಲು ಪ್ರಾರಂಭಿಸಿದರು. ಅವರಿದ್ದ ಸ್ಥಿತಿಯೇನು! ಈಗ ಒದಗಿರುವ ಸ್ಥಿತಿಯೇನು! ಈ ಬಡತನದಲ್ಲಿ ವಿವಾಹವೆಲ್ಲಿಯ ಮಾತು! ಪ್ರಿಯನೆಲ್ಲಿ! ಸರ್ವಂ ಮಿಥ್ಯಂ—ಎಲ್ಲವೂ ಸ್ವಪ್ನಮಯ.

* * * *

ಆ ಮನೆ ಒಂದು ಗಲ್ಲಿಯಲ್ಲಿರುವ ಹೆಂಚಿನ ಮನೆ. ರಸ್ತೆಯಲ್ಲಿ ಎಂದೂ ಇಲ್ಲದ ಮೋಟಾರಿನೊಂದರ 'ಹಾರನ್' ಶಬ್ದವು ಕೇಳಬಂದಿತು. ಬೆಲೆಬಾಳುವ ಉಡುಪನ್ನು ಧರಿಸಿದ ಶ್ರೀಮಂತರೊಬ್ಬರು ಮನೆಯೊಳಗೆ ನುಗ್ಗಿದರು. "ಮಾವಾ" ಎಂದು ಕೂಗುತ್ತ ಅವರು ಒಳಗೆ ಪ್ರವೇಶಿಸಿದರು. ಮೊದಲಿಯಾರರು ನಿಧಾನವಾಗಿ ಎದ್ದು ಕಣ್ಣೆತ್ತಿ ನೋಡಿದರು. ಅವರಿಗೆ ತಾವು ನೋಡುವುದು ನಿಜವೇ ಅಥವಾ ಸುಳ್ಳೇ ಎಂದು ಸಂಶಯ ಉಂಟಾಯಿತು; ಅವರು ತಮ್ಮ ಇದಿರಿನಲ್ಲಿ ಪೊನ್ನಂಬಲಂಅನ್ನು ಅಲ್ಲವೇ ನೋಡುತ್ತಿರುವರು!

"ಪೊನ್ನಂಬಲಂ ಅಲ್ಲವೇ? ಎಲ್ಲಿ ಬಂದೆಯಪ್ಪಾ? ಈ ನಿರ್ಭಾಗ್ಯರಾದ ನರಕವಾಸಿಗಳ ಮನೆಗೆ ನೀನು ಬರಬಹುದೇ?" ಎಂದು ಹೀನಸ್ವರದಲ್ಲಿ ಮೊದಲಿಯಾರರು ಹೇಳುತ್ತಿರುವಾಗಲೇ ಮುಂದೆ ಮಾತನಾಡಲಾರದೆ ದುಃಖವು ಅವರ ಗಂಟಲನ್ನು ಬಿಗಿಯಿತು.

"ನಾನು ನನ್ನ ಲಕ್ಷ್ಮಿಯನ್ನು ಮದುವೆಯಾಗಲು ಬಂದಿರುವೆನು. ಇದು ಸತ್ಯವಾದ ಮಾತು. ತಾವು ಯಾವುದಕ್ಕೂ ಚಿಂತಿಸಬೇಕಾಗಿಲ್ಲ."

"ಲಕ್ಷ್ಮಿ" ಎಂದು ಗಟ್ಟಿಯಾಗಿ ಒಂದು ಸಲ ಕಿರಚಿ, ಮೊದಲಿಯಾರರು ಜ್ಞಾನತಪ್ಪಿ ಬಿದ್ದರು. ಅವರಿಗುಂಟಾದ ಭಾವನಾತರಂಗವು ಅವರನ್ನು ಬೀಳಿಸಿಬಿಟ್ಟಿತು "ಲಕ್ಷ್ಮಿಯನ್ನೂ ನಮ್ಮ ದಾರಿದ್ರ್ಯದೆಶೆಗೆ ಸೆಳೆದುಕೊಂಡಿರುವೆವು ಅಲ್ಲವೇ! ಆಗಲೇ ಅವನನ್ನು ಸಮಾಧಾನಗೊಳಿಸಿ ಅವಳನ್ನು ಕೊಟ್ಟು ವಿವಾಹಮಾಡಿಬಿಟ್ಟಿದ್ದರೆ ಅವಳು ಸುಖವಾಗಿರುತ್ತಿದ್ದಳಲ್ಲಾ! ನಮ್ಮ ಹುಡುಗಿಗೆ ನಾವೇ ಶತ್ರುವಾಗಿ ಪರಿಣಮಿಸಿದೆವಲ್ಲಾ!" ಎಂದು ಪ್ರತಿನಿತ್ಯವೂ ಚಿಂತಿಸಿ ಚಿಂತಿಸಿ ಮನಸ್ಸನ್ನು ಹುಣ್ಣುಹುಣ್ಣಾಗಿ ಮಾಡಿಕೊಳ್ಳುತ್ತಿದ್ದವರಿಗೆ ಆ ಭಾವನೆಯು ಹುಟ್ಟುವುದರಲ್ಲಿ ಏನೊಂದು ಆಶ್ಚರ್ಯವೂ ಇಲ್ಲವಲ್ಲವೇ?

"ಅತ್ತೆ, ಲಕ್ಷ್ಮಿಯೆಲ್ಲಿ?" ಎಂದು ಸಮೀಪದಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಲಿದ್ದ ಅವಳ ಮಾತೆಯನ್ನು ಕೇಳಿದನು ಪೊನ್ನಂಬಲಂ. ಅವಳು ಮಾತನಾಡಲಾರದೆ ಪಕ್ಕದ ಕೊಠಡಿಯನ್ನು ಬೆರಳಿನಿಂದ ತೋರಿಸಿದಳು.

"ಲಕ್ಷ್ಮೀ!" ಎಂದು ಕೂಗುತ್ತಾ ಒಳಗೆ ಹೋದನು. ಅವನು ಮಾಡಿದ ಶಬ್ದದಿಂದ, ಬಳಲಿಹೋಗಿ ಮೈಮರೆತು ಮಲಗಿದ್ದ ಲಕ್ಷ್ಮಿ ಬೆಚ್ಚಿಬಿದ್ದು ಎದ್ದಳು, ನೋಡಿದಳು; "ಛೀ! ಎಂತಹ ಕನಸು? ಅವರು ಯಾಕೆ ಇಲ್ಲಿಗೆ ಬಂದಾರು?" ಎಂದು, ತೆರೆದ ಕಣ್ಣುಗಳನ್ನು ಮುಚ್ಚಿಕೊಂಡು ಪುನಃ ಮಲಗಿದಳು.

"ಲಕ್ಷ್ಮೀ! ಕನಸಲ್ಲ. ನಾನೇ, ನಿನ್ನ ಪೊನ್ನಂಬಲಂ. ನಿನ್ನನ್ನು ಈ ಪರಿಸ್ಥಿತಿಯಲ್ಲಿ ನೋಡಿ ಕೂಡ ಕಣ್ಣನ್ನು ಕಿತ್ತುಕೊಳ್ಳದೆ ನಿಂತಿರುವ ಪಾತಕನಾದ ಪೊನ್ನಂಬಲಂ. ಲಕ್ಷ್ಮೀ! ನನ್ನನ್ನು ನೋಡು, ಇಗೋ."

ಲಕ್ಷ್ಮಿಯ ಕಣ್ಣುಗಳು ತೆರೆದವು. ಕಣ್ಣೀರಿಡುತ್ತಾ ನಿಂತಿದ್ದ ಪೊನ್ನಂಬಲಂ ದೊಪ್ಪೆಂದು ಕುಳಿತನು. ಲಕ್ಷ್ಮಿ ಅವನ ಮಡಿಲಲ್ಲಿ ಬಿದ್ದಳು. ಆ ಕೊಠಡಿಯೆಲ್ಲವೂ ಅಶ್ರುಜಲದಿಂದ ತೊಯ್ದುಹೋಯಿತು.

* * * *

ಪೊನ್ನಂಬಲಂ ದೊಡ್ಡ ಪರೀಕ್ಷೆಯೊಂದರಲ್ಲಿ ತೇರ್ಗಡೆ ಹೊಂದಿದವನಾಗಿ ತಿಂಗಳಿಗೆ ೫೦೦ ರೂ. ಸಂಬಳದಲ್ಲಿ ಆಂಧ್ರದೇಶದಲ್ಲಿರುವ ಒಂದು ಊರಿಗೆ ಹೋದನು. ಆ ಕಾಲದಲ್ಲಿ ಮೊದಲಿಯಾರರು ಬಹಳ ಬಿಗುಮಾನದಿಂದಿದ್ದರು. ಪೊನ್ನಂಬಲಂ ಹೋದಂದಿನಿಂದ ಲಕ್ಷ್ಮಿ ತಂದೆಯವರಿಗೆ ಅವರನ್ನು ಕುರಿತು ವಿಚಾರಿಸಿ ಬರೆಯುವನು. ಆದರೆ ಲಕ್ಷ್ಮಿಯಾದರೋ ಒಂದನ್ನೂ ಬರೆಯುತ್ತಿರಲಿಲ್ಲ. ಊರಿಗೆ ಹೋದಾಗ ನೋಡಿಕೊಳ್ಳೋಣವೆಂದಿದ್ದು ಬಿಟ್ಟನು ಅವನು. ಒಂದು ವರ್ಷ ಕಳೆದನಂತರ ರಜಾಕ್ಕೆ ಬಂದನು. ತಿರುವೇಂಗಡಂ ಮೊದಲಿಯಾರರ ಹೀನಸ್ಥಿತಿಯ ವರ್ತಮಾನವು ತಿಳಿಯಬಂದಿತು. ತನ್ನ ಲಕ್ಷ್ಮಿಯನ್ನು ಹೊಂದಲು ಓಡಿಬಂದನು; ನೋಡಿದನು; ಕೊರಗಿದನು.

* * * *

ಆ ಪುಷ್ಯಮಾಸದಲ್ಲಿ ಪೊನ್ನಂಬಲಂಗೂ ಲಕ್ಷ್ಮಿಗೂ ಬಹಳ ವಿಜೃಂಭಣೆಯಿಂದ ವಿವಾಹ ನೆರವೇರಿತು. ಎಲ್ಲ ಖರ್ಚನ್ನೂ ಪೊನ್ನಂಬಲಮೇ ಹಾಕಿಕೊಂಡನು; ವಿವಾಹವಾದ ಒಂದು ತಿಂಗಳು ಕಳೆದನಂತರ ಲಕ್ಷ್ಮಿಯನ್ನೂ ಅವಳ ಮಾತಾಪಿತೃಗಳನ್ನೂ ಸಂಗಡ ಕರೆದುಕೊಂಡು ಆಂಧ್ರ ದೇಶಕ್ಕೆ ಹೊರಟು ಹೋದನು.

* * * *

"ಸತ್ತು ಹೋಗಿದ್ದರೆ ಏನು ಮಾಡುತ್ತಿದ್ದಿರಿ?" ಎಂದಳು ಲಕ್ಷ್ಮಿ.

"ನನ್ನ ಬಳಿಯೂ ವಿಷವಿದೆ." ಎಂದನು ಪೊನ್ನಂಬಲಂ.

"ಅಷ್ಟೊಂದು ಕಲ್ಲೆದೆಯವರೆಂದು ನಾನು ನಿಮ್ಮನ್ನು ತಿಳಿದಿರಲಿಲ್ಲ."

"ಅದನ್ನು ಏಕೆ ಮರಳಿ ಮರಳಿ ಹೇಳಿ ಮನಸ್ಸನ್ನು ಹುಣ್ಣು ಮಾಡುತ್ತಿರುವೆ? ವಿಷ ಪರೀಕ್ಷೆಯನ್ನು ಮಾಡಿ ಮೋಸ ಹೋದೆ. "ಇವರು ಬಹು ಉದಾರಿ. ಸುಮ್ಮನೆ ಖರ್ಚು ಮಾಡುತ್ತಾರೆ. ಒಂದಾನೊಂದು ಕಾಲದಲ್ಲಿ ಇವರು ಪೇಚಾಡುವ ಸ್ಥಿತಿಗೆ ಬರುವರು." ಎಂದು ಮುಂಚಿನಿಂದಲೇ ನಾನು ಭಾವಿಸಿದೆನು. ಭವಿಷ್ಯದಲ್ಲಿ ಅಂತಹ ಕಾಲವೊಂದು ಒದಗುವದೆಂದು ನನಗೆ ಖಂಡಿತವಾಗಿಯೂ ಗೊತ್ತಿತ್ತು. ಅದಕ್ಕೆ ದಾರಿಯೇನೆಂದು ಯೋಚಿಸಿದೆ. "ಇಪ್ಪತ್ತು ಸಾವಿರ ರೂಪಾಯಿಗಳನ್ನು ಇವರ ಹತ್ತಿರದಲ್ಲಿ ಏನಾದರೊಂದು

ನೆಪ ಹೇಳಿ ತೆಗೆದುಕೊಂಡರೆ ಅನಂತರ ಸಹಾಯ ಮಾಡೋಣ'' ಎಂದು ಭಾವಿಸಿದೆ. ನಾನೊಂದು ನೆನೆದರೆ ದೇವರೊಂದು ನೆನೆದು ಬಿಟ್ಟನು. ಅವರು ಒಂದೇ ಹಠಹಿಡಿದರು. ನಾನೂ ಹೋಗಿ ಕೆಲಸಕ್ಕೆ ಸೇರಿದೆ. ಊರಿನಿಂದ ನಿಮ್ಮ ವಿಷಯವಾಗಿ ವರ್ತಮಾನವೇನೂ ನನಗೆ ಬರಲಿಲ್ಲ. ಆದರೂ ಇಷ್ಟೊಂದು ಶೀಘ್ರವಾಗಿ ಇಂತಹ ಸ್ಥಿತಿಗೆ ಬರುವಿರೆಂದು ನಾನು ಭಾವಿಸಲೇ ಇಲ್ಲ. ಊರಲ್ಲಿ ಹೋಗಿ ಇಳಿದೆ. ನನ್ನ ತಂದೆಯುವರು—ಮುಂಚೆ ಒಂದು ಮಾತೂ ಕೂಡ ಬರೆಯುದಿದ್ದವರು—ಸಾವಕಾಶವಾಗಿ ನಿಮ್ಮಗಳ ಚರಿತ್ರೆಯನ್ನು ಹೇಳಿದರು. "ನಾನು ಆಲೋಚಿಸಿದಷ್ಟೂ ಹಾಳಾಗಿಹೋಯಿತಲ್ಲಾ ! ಪೂರ್ತಿ ಹೋಗುವುದರೊಳಗಾಗಿ ಏನಾದರೂ ಮಾಡಲಾದೀತೇ ನೋಡೋಣ'' ಅಂದುಕೊಂಡು ಓಡಿಬಂದೆ. ನನ್ನ ಲಕ್ಷ್ಮಿಯನ್ನು ಜೀವಸಹಿತವಾಗಿ ನೋಡುವಷ್ಟಾದರೂ ಅದೃಷ್ಟವಿದ್ದಿತಲ್ಲಾ.''

ತಿರುವೇಂಗಡ ಮೊದಲಿಯಾರರಿಂದ ಮದುವೆಯಲ್ಲಿ ಹೊಂದುವುದನ್ನು ಸಮಯ ನೋಡಿ ಅವರಿಗೇ ಉಪಕರಿಸೋಣವೆಂದು ಪೊನ್ನಂಬಲಂ ಆಲೋಚಿಸಿದ. ಆ ಆಲೋಚನೆಯೇ ಇಷ್ಟೊಂದಕ್ಕೂ ಕಾರಣವಾಗಿ ಪರಿಣಮಿಸಿತು. ವಿಶಾಖಪಟ್ಟಣದಲ್ಲಿ ಮೊದಲಿಯಾರರು ಪೊನ್ನಂಬಲಂ ಕೊಟ್ಟ ಐದು ಸಾವಿರ ರೂಪಾಯಿಗಳನ್ನು ಮೂಲವಾಗಿಟ್ಟುಕೊಂಡು ಪ್ರಾರಂಭಿಸಿದ ಪ್ರಕಟನಾಲಯವು ಅವರ ಅಸಹಾಯಶೂರತನದಿಂದ ಒಳ್ಳೆಯ ಸ್ಥಿತಿಗೆ ಬಂದಿತು. ಅದಕ್ಕೂ ಅಳಿಯ ಪೊನ್ನಂಬಲಂ ಕಾರಣನಲ್ಲವೇ ? ಅವನ ವಿಷಪರೀಕ್ಷೆ ಎಷ್ಟೆಷ್ಟೋ ಸಂಕಟಗಳನ್ನುಂಟುಮಾಡಿದ್ದರೂ ಅವನ ನೈಜವಾದ ಪ್ರೇಮವನ್ನು ನಿರೂಪಿಸಿಬಿಟ್ಟಿತು.

# ಪರಿವರ್ತನೆ

"ಸಿತ್ತಲವಾಯ್! ಸಿತ್ತಲವಾಯ್!" ಎಂದು ಪೋರ್ಟರು ಕೂಗಿದನು. ಅವನು ಆ ರೀತಿಯಾಗಿ ತಿಳಿಸದಿದ್ದಲ್ಲಿ ಆ ಊರಿನ ಹೆಸರಾಗಲಿ ವಿಶೇಷವಾಗಲಿ ರೈಲಲ್ಲಿ ಪ್ರಯಾಣ ಮಾಡುವವರಿಗೆ ತಿಳಿಯಲು ಸಾಧ್ಯವಿಲ್ಲ. ಸ್ಟೇಷನ್ನಿನಲ್ಲಿ ಗಾಡಿ ನಿಂತಿತು. ಸಭ್ಯಗೃಹಸ್ಥರೊಬ್ಬರು ಇಬ್ಬರು ಹೆಂಗಸರನ್ನೂ ಒಂದು ಮಗುವನ್ನೂ ನಾನಿದ್ದ ಗಾಡಿಯಲ್ಲಿ ಹತ್ತಿಸಿ, "ಜಾಗ್ರತೆಯಾಗಿ ಹೋಗಿ ಬಾಮ್ಮಾ!........ಲಕ್ಷ್ಮೀ, ಹೋಗಿಬರುತ್ತೀಯಾ? ಅಳಿಯಂದರಿಗೆ ಹೇಳು, ನನಗೆ ಕೆಲಸ ಜಾಸ್ತಿಯೆಂದು" ಎಂದು ಹೇಳಿ ಕೆಳಗೆ ನಿಂತರು. "ರಾಜಾ! ಹೋಗಿ ಬರುತ್ತೀಯಾ?........ಮಗು ಜೋಕೆ. ಹೊಡೆಯಬೇಡ. ರಾಜಾ, ಹೋಗಿಬರುತ್ತೀಯಾ?" ಆ ಮಗುವನ್ನೂ ಅದನ್ನು ಎತ್ತಿಕೊಂಡಿದ್ದ ಮಾತೆಯನ್ನೂ ಮರಳಿ ಮರಳಿ ನೋಡುತ್ತಾ ಹಿಂದಿರುಗಿ ಹೋಗಲು ಉತ್ತರ ಪಡೆದರು ಆ ಮನುಷ್ಯರು.

ಮಗುವಿನ ತಾಯಿ ಲಕ್ಷ್ಮಿಯು, ಮಗುವಿನ ಕೆನ್ನೆಯನ್ನು ಮೆಲ್ಲಗೆ ಜಿಗುಟುತ್ತಾ "ಮಾವನನ್ನು ನೋಡು. ನಮ್ಮೂರಿಗೆ ಬಾ ಎಂದು ಹೇಳು, ಜಾಣನಾಗಿ ಅಳದೇ ಇರುತ್ತೇನೆಂದು ಹೇಳು" ಎಂದು ಮಗುವಿನ ತೊದಲು ನುಡಿಯಲ್ಲಿ ಮಾತನಾಡಿದಳು.

ಗಾಡಿ ಊದಿಬಿಟ್ಟಿತು. ಗಾಡಿ ಹೊರಡುವುದರೊಳಗಾಗಿಯೇ ಆ ಮನುಷ್ಯರು ನೂರು ಸಾರಿ "ಜೋಕೆ" ಹೇಳಿಬಿಟ್ಟರು.

ಮೂವರೂ ಗಾಡಿಯಲ್ಲಿ ಕುಳಿತರು; ಇಬ್ಬರು ಕುಳಿತರೆಂದು ಹೇಳುವುದೇ ನ್ಯಾಯ; ಮಗು ಅಮ್ಮನ ಮಡಿಲಲ್ಲಿ ಇತ್ತು.

ಅವರು ಕುಳಿತಿದ್ದ ಹಲಗೆಗೆ ಇದಿರು ಹಲಗೆಯಲ್ಲಿ ಯಾರೋ ಒಬ್ಬ ಗೌಡರ ಹೆಂಗಸು ತನ್ನ ಮಗುವಿನೊಂದಿಗೆ ಕುಳಿತಿದ್ದಳು. ಈ ಎರಡು ಮಕ್ಕಳಿಗೂ ಹತ್ತಿರ ಹತ್ತಿರ ಒಂದೇ ಪ್ರಾಯವಿರಬೇಕು.

ಗಾಡಿಯಲ್ಲಿ ಕೂಟವೇನೂ ಅಧಿಕವಾಗಿರಲಿಲ್ಲ. ಚಿಕ್ಕ ಗಾಡಿ. ಎಲ್ಲರೂ ಸೇರಿ ಏಳು ಮಂದಿಗೆ ಮೇಲಿರಲಿಲ್ಲ.

ಆ ಸ್ಟೇಷನಿನಲ್ಲಿ ಹತ್ತಿದ ಸ್ತ್ರೀಯರಲ್ಲಿ ಒಬ್ಬಳಿಗೆ ಐವತ್ತು ವರ್ಷ ಪ್ರಾಯವಿರಬಹುದು. ಮಗುವಿನ ತಾಯಿಗೆ ಇಪ್ಪತ್ತು ಇಪ್ಪತ್ತೆರಡು ವರ್ಷ ವಯಸ್ಸಿರಬಹುದು.

ಅವರು ಕುಳಿತೊಡನೆಯೇ ಎಲ್ಲರ ದೃಷ್ಟಿಯೂ ಆ ಮಗುವಿನ ಮೇಲೆ ಬಿದ್ದಿತು. ರಾಜನೆಂಬ ಹೆಸರು ಆ ಮಗುವಿಗೆ ಸಕಲ ವಿಧದಲ್ಲಿಯೂ ತಕ್ಕುದೇ. ಒಳ್ಳೆಯ ಲಕ್ಷಣವಾದ ಮುಖ; ಚಿಂತೆಯೆಂಬುದನ್ನೇ ತಿಳಿಯದೆ ಆವಶ್ಯಕವಾದ ಸಮಯದಲ್ಲಿ ಆವಶ್ಯಕವಾದ ವಸ್ತುವನ್ನು ಹೊಂದಿ ಬೆಳೆದ ಬೆಳವಣಿಗೆ, ಸುಂದರವಾದ ಕಣ್ಣುಗಳು, ಇವೆಲ್ಲವೂ ಆ ಆಕರ್ಷಣೆಗೆ ಕಾರಣ. ಇದಕ್ಕೂ ಮೇಲೆ ಅವನು ತೊಟ್ಟಿದ್ದ ಕಾಲುಚೀಲ, ಬೂಟ್ಸ್, ಅದರ ಬಾಯಿಗೆ ಅಂಚು ಕಟ್ಟಿದ ಹಾಗಿರುವ ಕಾಲಂದಿಗೆ, ಗೆಜ್ಜೆ, ಮಕಮಲ್ಲಿನ ನಿಕ್ಕರ್, ಮಕಮಲ್ಲಿನ ಅಂಗಿ, ಇಂತಹ ಉಡಿಗೆತೊಡಿಗೆ ವಗೈರೆಗಳೂ ಆ ಪುಟಾಣಿ ಮಗುವನ್ನು ಮತ್ತಷ್ಟು ಸೌಂದರ್ಯಶಾಲಿಯನ್ನಾಗಿ ಬೆಳಗಿಸಿತು.

ಆ ಮಗುವಿಗೆ ತಾಯಾಗಿರಲು ಭಾಗ್ಯವನ್ನು ಮಾಡಿದ ಲಕ್ಷ್ಮಿ ಸಹ ಒಳ್ಳೆಯ ಸೌಂದರ್ಯವತಿಯಾಗಿಯೇ ಇದ್ದಳು. ಅವಳ ಕೊರಳಲ್ಲೂ, ಕಿವಿಗಳಲ್ಲೂ, ಕೈಗಳಲ್ಲೂ ಇದ್ದ ಆಭರಣಗಳನ್ನೂ, ಉಡುಪನ್ನೂ ಗಮನಿಸಿದಲ್ಲಿ ಅವಳೊಬ್ಬ ಶ್ರೀಮಂತ ಮನೆತನದವಳೆಂದು ತಿಳಿಯಬಹುದು.

ಗಾಡಿ ಹೊರಟೊಡನೆಯೇ ಆ ಮಗು ಕೆಳಗೆ ನಿಂತಿದ್ದವರನ್ನು ಕುರಿತು ತನ್ನ ಪುಟಾಣಿ ಕೈಯಿಂದ ತೋರಿಸಿ, "ಮಾವ!........ಮಾವ!" ಎಂದು ಹೇಳಿ ಪ್ರಶ್ನಿಸುವ ಭಾವನೆಯಲ್ಲಿ ತನ್ನ ತಾಯಿಯ ಮುಖವನ್ನು ನೋಡಿದನು. "ಮಾವನು ಏಕೆ ಬರಲಿಲ್ಲ?" ಎಂಬ ಅರ್ಥವನ್ನು ಆ ನೋಟವು

ಸೂಚಿಸುವಂತಿತ್ತು. "ಮಾವನು ನಾಳೆ ಬರುತ್ತಾರೆ" ಎಂದು ಲಕ್ಷ್ಮಿ ಉತ್ತರ ಹೇಳಿ ಮಗುವನ್ನು ಮುದ್ದಿಟ್ಟುಕೊಂಡಳು.

ಮಗುವೂ ತಾಯಿಯೂ ಸೇರಿ ಅದೊಂದು ಸುಂದರವಾದ ದೃಶ್ಯವಾಗಿತ್ತು. ಆ ಗಾಡಿಯಲ್ಲಿ ಕುಳಿತಿದ್ದ ನಾನು ಮಗುವನ್ನೇ ನೋಡುತ್ತಿದ್ದೆ.

"ತಾಯೀ, ಗಂಡಸರಾರೂ ಜೊತೆಗೆ ಬರಲಿಲ್ಲವೇ ?" ಎಂಬ ಪ್ರಶ್ನೆಯೊಂದು ಹೊರಟಿತು. ಅವರಿಗೆ ಎದುರು ಪಕ್ಕದಲ್ಲಿ ಕುಳಿತಿದ್ದ ಹೆಂಗಸೇ ಆ ಪ್ರಶ್ನೆಯನ್ನು ಹಾಕಿದವಳು.

"ನಾಲ್ಕು ಸ್ಟೇಷನುಗಳಾದ ಮೇಲೆ ಇಳಿಯುತ್ತೇವೆ. ಇಷ್ಟಕ್ಕೋಸ್ಕರ ಗಂಡಸರ ಜೊತೆ ಏತಕ್ಕೆ ? ಸ್ಟೇಷನಿಗೆ ರಾಯರು ಬರುವರು" ಎಂದು ಆ ವಯೋಧಿಕಳು ಉತ್ತರಕೊಟ್ಟಳು.

"ಯಾವ ಊರಿಗೆ ಹೋಗುತ್ತೀರಿ ?" ಎಂದು ಪುನಃ ಪ್ರಶ್ನೆಯು ಹೊರಟಿತು.

"ನಾವೇ? ಎಲಮನೂರಿಗೆ ಹೋಗುತ್ತೇವೆ."

"ಅನಂತರ ಕೋಟೆಗೆ ಎಷ್ಟು ಸ್ಟೇಷನುಗಳು ಬಾಕಿ ?" ಎಂಬ ಪ್ರಶ್ನೆಯಿಂದ ಆ ಹೆಂಗಸು ತಾನು ತಿರುಚಿನಾಪಳ್ಳಿ ಕೋಟೆಗೆ ಹೋಗುವುದನ್ನು ತಿಳಿಸಿದಳು.

"ಈ ಕೂಸಿಗೆ ಎಷ್ಟು ಪ್ರಾಯ ತಾಯೀ ?"

"ಎರಡು ತುಂಬಿ ಮೂರನೆಯ ವರ್ಷ ನಡೆಯುತ್ತಿದೆ" ಎಂದು ಲಕ್ಷ್ಮಿ ಉತ್ತರವಿತ್ತಳು.

ಈ ಸಂಭಾಷಣೆಯಲ್ಲಿ ನಾನೂ ಅರಿವಿಲ್ಲದೆ ತಲ್ಲೀನನಾದೆನು. ರಾಜನನ್ನು ಗಮನಿಸಿ ಅವನ ರೂಪಿನಲ್ಲಿ ಲಯವಾಗಿದ್ದ ನನ್ನ ಕಣ್ಣು ಇದಿರು ಹಲಗೆಯಲ್ಲಿದ್ದ ಮಾತೆಯ ಮೇಲೂ ಮಗುವಿನ ಮೇಲೂ ಹೊರಳಿತು. ತಿರುಚಿನಾಪಳ್ಳಿ ಕೋಟೆಗೆ ಹೋಗುವ ಆ ಹೆಂಗಸೂ ಅವಳು ತನ್ನ ಹತ್ತಿರದಲ್ಲಿ ಕುಳ್ಳಿರಿಸಿಕೊಂಡಿದ್ದ ಮಗುವೂ ಇದಿರಿಗಿರುವವರಿಗೆ ವಿರೋಧವಾದ ದೃಶ್ಯವನ್ನು ಕಾಣಿಸುತ್ತಲಿದ್ದರು. ಅವಳು ಬಡತನದ ಒಂದು ಚಿತ್ರವಾಗಿ ಪರಿಣಮಿಸಿ

ದಳು. ಅವಳ ಮಗುವಾದರೋ ದರಿದ್ರನಾರಾಯಣನ ಪುಟಾಣಿ ಅವತಾರ ವಾಗಿ ತೋರಿತು. ಕೈಕಾಲು ಸಣಕಲು ಸಣಕಲಾಗಿದ್ದವು; ಹೊಟ್ಟೆ ಮುಂದಕ್ಕೆ ಬಂದಿತ್ತು. ನಿರ್ವಾಣವಾಗಿ, ಸೊಂಟದಲ್ಲಿ ಮಾತ್ರ ಒಂದು ಕೊಳಕಾದ ಉಡಿದಾರವು ಕಟ್ಟಿದ್ದಿತು. ಆ ಉಡಿದಾರದಲ್ಲಿ ಬೆಳ್ಳಿಯ ತಾಯತವು ಮಾತ್ರ ತೂಗಾಡುತ್ತಿದ್ದಿತು. ಕೊರಳಲ್ಲಿ ಒಂದು ತಾಯತವು ಪೋಣಿಸಿದ ದಾರವೊಂದು ಕಟ್ಟಿರುವುದನ್ನೂ ಕಂಡಲ್ಲಿ ಆ ಮಗುವಿಗೆ ಯಾವುದೋ ಒಂದು ಕಾಹಿಲೆಯೆಂದೂ, ಆ ಕಾಹಿಲೆಯನ್ನು ಹೋಗಲಾಡಿ ಸಲು ಆ ಬಡಹೆಂಗಸು ಭಗವಂತನನ್ನೂ ಮಂತ್ರವನ್ನೂ ನಂಬಿರುವಳೆಂದೂ ತೋರಿತು.

"ಮಗುವಿಗೇನು ಕಾಹಿಲೆ?" ಎಂದು ರಾಜನ ಅಜ್ಜಿ—ಲಕ್ಷ್ಮಿಯ ತಾಯಿ—ಕೇಳಿದಳು. ಅವಳ ಧ್ವನಿಯಲ್ಲಿ ಕನಿಕರವು ತೋರಿತು.

"ದೋಷ ತಾಕಿದೆ, ಪೂಜಾರಿ ರಕ್ಷೆ ಕಟ್ಟಿದ್ದಾನೆ" ಎಂದು ದುಃಖ ದೊಡನೆ ಹೇಳಿ, ತನ್ನ ತಾಯೊಲವೆಲ್ಲವನ್ನೂ ಒಟ್ಟುಗೂಡಿಸಿ ಮಗುವನ್ನು ಹತ್ತಿರ ಸೆಳೆದು ಅಪ್ಪಿಕೊಂಡು ಅದರ ಬೆನ್ನನ್ನು ಸವರಿದಳು ಮಾತೆ. ಆ ಮಗು ವಿಗೆ ದೇಹಾದ್ಯಂತವೂ ಕೊಳೆ. ಎಣ್ಣೆಯನ್ನು ಕಂಡರಿಯದು ಅದರ ತಲೆ. ಸೌಖ್ಯವನ್ನರಿಯದು ಅದರ ಹೊಟ್ಟೆ. ಆ ಮಗು ಬಹಳ ಸಾಧುವಾಗಿ ಕುಳಿತಿದ್ದಿತು.

ಇಬ್ಬರು ತಾಯಂದಿರೂ ಅದೇನೇನನ್ನೋ ಸಂಭಾಷಿಸುತ್ತಿರಲು, ಎರಡು ಮಕ್ಕಳೂ ಒಬ್ಬರನ್ನೊಬ್ಬರು ನೋಡಿಕೊಂಡವು; ರಾಜನು ತಟ್ಟನೆ ಅಮ್ಮನ ಮುಖವನ್ನು ತಿರುಗಿ ನೋಡಿ, "ಪಾಪ, ಅಕೋ ಪಾಪ" ಎಂದು ಇದಿರಿಗಿರುವ ಮಗುವನ್ನು ತೋರಿಸಿದನು.

ಆ ಮಾತನ್ನು ಕೇಳಿದ ಬಡಕೂಸು ತನ್ನ ತಾಯಿಯ ಮುಖ ವನ್ನು ಅಶಕ್ತಿಯಿಂದ ನೋಡಿದನು. ಅವಳ ಮುಖದಲ್ಲಿ ಆನಂದವು ತುಂಬಿ ತುಳುಕಾಡಿತು.

"ಪುಟ್ಟ ಅಯ್ಯನೋರು" ಎಂದು ತನ್ನ ಮಗುವಿಗೆ ಅವಳು ರಾಜನನ್ನು ಗುರುತು ಮಾಡಿಕೊಟ್ಟಳು. ರಾಜನು ನಿಮಿಷಮಾತ್ರವೂ ಸುಮ್ಮನಿರು

ತ್ತಿರಲಿಲ್ಲ. ಏನೇನನ್ನೋ ತನ್ನ ತೊದಲ್ನುಡಿಗಳಲ್ಲಿ ನುಡಿಯುತ್ತಲೇ ಇದ್ದನು. ಎಲ್ಲರೂ ಕೇಳಿ ಕೇಳಿ ನಗುತ್ತಲಿದ್ದರು. ಆ ಸಮಯದಲ್ಲಿ ಲಕ್ಷ್ಮಿಗುಂಟಾದ ಮನೋತೃಪ್ತಿಯೆಷ್ಟೆಂಬುದನ್ನು ವರ್ಣಿಸಲಸಾಧ್ಯ. ಮಧ್ಯೆ ಮಧ್ಯೆ ತನ್ನ ಆನಂದವು ಕೋಡಿ ಹರಿದು ಉಕ್ಕಿ ಸುರಿಯುವಾಗ, "ಲೋ, ಪೋಲಿ!" ಎಂದು ಮೆಲ್ಲಗೆ ಅವನ ಕೆನ್ನೆಗೆ ಒಂದೇಟನ್ನು ಕೊಡುವಳು.

ಅಜ್ಜಿಯು ತನ್ನ ಕೈಯ್ಯಲ್ಲಿದ್ದ ಚೀಲದಿಂದ ಒಂದು ಬಿಸ್ಕತ್ತನ್ನು ತೆಗೆದು ರಾಜನ ಕೈಗೆ ಕೊಟ್ಟಳು. ಅದನ್ನು ಅವನು ಬಾಯಲ್ಲಿಟ್ಟುಕೊಂಡು ಕಚ್ಚಿದನು. ಇದಿರು ಪಾರ್ಶ್ವದಲ್ಲಿ ಕುಳಿತಿದ್ದ ಮಗುವು ಅದನ್ನು ಬಲು ಆಶೆಯೊಡನೆ ನೋಡಿತು. ಆ ಮುದುಕಿಗೆ ಪಜ್ಞ್ಕ್ತಿವಂಚನೆ ಮಾಡುವುದು ಪಾಪಕರವೆಂದು ತೋರಲಿಲ್ಲ. ರಾಜನು ಅದರಲ್ಲಿ ಅರ್ಧವನ್ನು ಕಚ್ಚಿಕೊಂಡು ಮಿಕ್ಕ ಅರ್ಧವನ್ನು ಬಡ ಮಗುವಿನ ಕಡೆಗೆ ನೀಡಿದನು. ಆ ಮಗುವು ಅದನ್ನು ಕೈನೀಡಿ ತೆಗೆದುಕೊಳ್ಳಲು ಪ್ರಯತ್ನಿಸಿತು. ಮಗುವು ಬಿದ್ದು ಬಿಟ್ಟೀತೆಂಬ ಭಯದಿಂದ ಅದರ ತಾಯಿ ಅದನ್ನು ತೆಗೆದು ತನ್ನ ಮಗುವಿಗೆ ಕೊಟ್ಟಳು. ಆದುವರೆಗೂ ಕಂಡರಿಯದ ರುಚಿಯನ್ನು ಅದು ಅನುಭವಿಸುತ್ತಲಿದ್ದಿತು.

ಮತ್ತೊಂದು ಬಿಸ್ಕತ್ತನ್ನು ಅಜ್ಜಿಯು ಮೊಮ್ಮಗನಿಗೆ ಇತ್ತಳು. ಅದನ್ನೂ ಸಹ ಅವನು ಅರ್ಧ ಕಚ್ಚಿಕೊಂಡು ಮತ್ತೊಂದು ಅರ್ಧವನ್ನು ನೀಡಿದನು. ಆದರೆ ಈಗ ಇದಿರಿನಲ್ಲಿದ್ದ ಬಡ ಹೆಂಗಸು ತೆಗೆದುಕೊಳ್ಳಲಿಲ್ಲ.

"ಸಾಕು ಸಾಮೀ, ನೀವು ತಿನ್ನಿ, ಇವನಿಗೆ ಬಿಸ್ಕೋತ್ತು ಬೇಡ, ನನ್ನ ಹತ್ತಿರ ವಡೆ ಇದೆ, ಕೊಡುತ್ತೇನೆ" ಎಂದು ಹೇಳಿದಳು. ಬಿಸ್ಕತ್ತನ್ನು ತಿನ್ನವಂತಹ ಅಂತಸ್ತು ಆ ಮಗುವಿಗಿಲ್ಲವೆಂದು ಅವಳು ಭಾವಿಸಿರಬಹುದಲ್ಲವೇ ?

"ಸಾಕೋ, ನೀನು ತಿನ್ನು, ಆಮೇಲೆ ದಾನ ಮಾಡುವಿಯಂತೆ" ಎಂದು ಲಕ್ಷ್ಮಿಯು ಮಗುವನ್ನು ಗದರಿಸಿದಳು. ಪ್ರಥಮದಲ್ಲಿ ದಯಾದಾಕ್ಷಿಣ್ಯಕ್ಕಾಗಿ ಅವಳು ಒಂದು ಬಿಸ್ಕತ್ತಿನ ಚೂರಿನ ದಾನಕ್ಕೆ ಅನುಮತಿಯಿತ್ತಿದ್ದಳು. ಪುನಃ ಪುನಃ ದಾನ ಮಾಡಿದಲ್ಲಿ ಅವಳಿಂದ ಸಹಿಸಲಾಗುವುದೇ ?

ಅವಳು ಆಡಿದ ಮಾತಿನಿಂದ ಅಕ್ಕಪಕ್ಕಗಳಲ್ಲಿ ಕುಳಿತಿದ್ದವರಿಗೆ ಅವಳ ಕೃಪಣತ್ವವು ತಿಳಿಯಬಂದಿತು. ಅದುವರೆಗೂ ಅವರನ್ನು ಮಂದ

ಹಾಸದೊಡನೆ ಗಮನಿಸುತ್ತಿದ್ದವರ ವದನಗಳಲ್ಲಿ ಜುಗುಪ್ಸೆಯ ಛಾಯೆಯೊಂದು ತೆಳುವಾಗಿ ಪಸರಿಸಿತು. ಇದನ್ನು ಲಕ್ಷ್ಮಿ ಹೇಗೋ ಅರಿತುಕೊಂಡಳು.

"ಡಾಕ್ಟರು ಮಗುವಿಗೆ ಈ ಬಿಸ್ಕತ್ತನ್ನು ಮಾತ್ರವೇ ಕೊಡಹೇಳಿದ್ದಾರೆ. ಕೋಟೆಯಿಂದ ಇವರ ತಂದೆಯು ಕೊಂಡು ತಂದಿರುವರು'' ಎಂದು ತನ್ನ ವರ್ತನೆಗೆ ಸಮಾಧಾನವನ್ನು ಸೂಚಿಸುವಂತೆ ಅವಳು ಹೇಳಿದಳು.

ಆ ಬಡ ಹೆಂಗಸಾದರೋ ತನ್ನ ಮಗುವು ಒಂದು ಸಾರಿ ಹೊಂದಿದ ದಾನವನ್ನೇ ದೊಡ್ಡದಾಗಿ ಭಾವಿಸಿದವಳಾಗಿ ಹಿಗ್ಗಿದಳು. ಪುನಃ ಕೊಡಲಿಲ್ಲವಲ್ಲಾ ಎಂಬ ಕೊರತೆ ಆವಳಿಗೆ ಸ್ವಲ್ಪವೂ ಇದ್ದಂತೆ ತೋರಿಬರಲಿಲ್ಲ.

ಬಿಸ್ಕತ್ತಿನ ತುಂಡನ್ನು ಮಗುವು ಸ್ವಲ್ಪ ಸ್ವಲ್ಪವಾಗಿ ಕಚ್ಚಿ ತಿಂದು ಮುಗಿಸಿತು. ಆಗ ರಾಜನು ಎರಡನೆಯ ಬಿಸ್ಕತ್ತನ್ನು ತಿಂದು ಸವಿಯುತ್ತಿದ್ದನು. ಬರಿಯ ಬಾಯನ್ನು ಅಲುಗಾಡಿಸುತ್ತಲಿದ್ದ ಬಡ ಮಗುವು, "ಅಮ್ಮಾ ನನಗೆ" ಎಂದು ಮೆಲ್ಲಗೆ ಗೊಣಗುಟ್ಟಲು ತೊಡಗಿತು.

"ರುಚಿ ನೋಡಿದ ಬೆಕ್ಕನ್ನು ನೋಡಿದೆಯೇನೇ ಅಮ್ಮ'' ಎಂದು ಪರಿಹಾಸ್ಯವಾಗಿ ನಗುತ್ತಾ ಲಕ್ಷ್ಮಿ ತನ್ನ ತಾಯಿಯನ್ನು ಕೇಳಿದಳು. ಆ ಮುದುಕಿಯು ಏನೊಂದೂ ಹೇಳಲಿಲ್ಲ. ಮಗುವಿನ ಆಶೆಯು ಹೆಚ್ಚಿತು, ''ಅದು ಬೇಡ ಕಂದಾ, ಪುಟ್ಟ ಅಯ್ಯನೋರು ತಿನ್ನಲಿ." ಎಂದು ಮಾತೆ ಹೇಳುವುದು ಮಗುವಿನ ಕಿವಿಗೆ ಬೀಳಲಿಲ್ಲ. ಅಳತೊಡಗಿತು. ''ಹೊಡೆಯುತ್ತೀನೆ ನೋಡು'' ಎಂದು ಗದರಿಸಿದಳು. ಅದು ಕೇಳಲಿಲ್ಲ. ಬೇರೆ ದಾರಿಯೊಂದೂ ತೋರದವಳಾಗಿ ತಾನು ಇಟ್ಟಿದ್ದ ಸಣ್ಣ ಬಟ್ಟೆಯ ಮೂಟೆಯನ್ನು ಬಿಚ್ಚಿ ಅದರಲ್ಲಿ ಒಂದು ಮೂಲೆಯಲ್ಲಿ ಗಂಟು ಹಾಕಿಟ್ಟಿದ್ದ ವಡೆಯೊಂದನ್ನು ಮಗುವಿಗೆ ಕೊಟ್ಟಳು. ಮಗುವು ಎರಡು ಕೈಗಳಿಂದಲೂ ಅದನ್ನು ತೆಗೆದುಕೊಂಡು ಕಚ್ಚತೊಡಗಿತು. ಪ್ರಾರಂಭವಾದ ಅಳು ಪುನಃ ತೋರಲಿಲ್ಲ.

ರಾಜನು ಬಿಸ್ಕತ್ತನ್ನು ಮುಕ್ಕಾಲುಪಾಲು ತಿಂದುಬಿಟ್ಟನು. ಸಣ್ಣ ಚೂರೊಂದು ಮಾತ್ರ ಕೈಯ್ಯಲ್ಲಿತ್ತು. ತನ್ನ ಪ್ರೀತಿಗೆ ಪಾತ್ರನಾದ ದೀನನಿಗೆ ಕೊಡಲು ಆಗಲಿಲ್ಲವಲ್ಲಾ ಎಂಬ ಚಿಂತೆಯೋ ಏನೋ, ಅವನು ಪದೇ ಪದೇ ಅಮ್ಮನ ಮುಖವನ್ನು ಹಿಡಿದು ತಿರುಗಿಸಿ ತಿರುಗಿಸಿ, "ಪಾಪಾ, ಪಾಪಾ, ತಿನ್ನಿ

(ತಿಂಡಿ)'' ಎಂದು ಹೇಳುತ್ತಲೇ ಇದ್ದನು. ಆ ಪಾಪನು ಗೊಣಗಲು ಪ್ರಾರಂಭಿಸಿದೊಡನೆಯೇ ಅವನ ಅನುತಾಪವು ಅಧಿಕವಾಗಲಾರಂಭಿಸಿತು.

''ಅಜ್ಜೀ, ಪಾಪಾ'' ಎಂದು ತನ್ನ ಅಜ್ಜಿಯನ್ನು ಕುರಿತು ಅದೇನನ್ನೋ ಹೇಳಲು ಬಂದನು. ''ಪಾಪಾಗೆ ಬೇಡವಂತ; ನೀನು ತಿನ್ನು'' ಎಂದು ತನ್ನ ಅಭಿಪ್ರಾಯವನ್ನು ಅಜ್ಜಿ ಹೊರಗೆಡವಿದಳು.

''ಬೇಡ ?'' ಎಂದು ಸಣ್ಣದೊಂದು ಪ್ರಶ್ನಿಸುವ ಧ್ವನಿಯಲ್ಲಿ ರಾಜನು ಕೇಳಿ, ತನ್ನ ಪುಟಾಣಿ ಸ್ನೇಹಿತನನ್ನೂ ಅವನ ಅಮ್ಮನನ್ನೂ ಮರಳಿ ಮರಳಿ ನೋಡಿದನು. ಅಜ್ಜಿ ಹೇಳಿದ ಮಾತುಗಳಲ್ಲಿ ಅದೆಷ್ಟೊಂದು ಸತ್ಯವಿರಬಹುದೆಂದು ತಿಳಿಯಲು ಅವನು ಪ್ರಯತ್ನಪಟ್ಟಿರಬಹುದು. ಆದರೆ ಅವನ ನೋಟದ ಭಾಷೆಯನ್ನು ಇತ್ಯರ್ಥ ಮಾಡಿಕೊಳ್ಳಲು ಅವರಿಗೆ ಶಕ್ತಿಯೂ ಇಲ್ಲ, ಮನಸ್ಸೂ ಇಲ್ಲ.

ಬಡ ಮಗು ವಡೆಯನ್ನು ಕಚ್ಚಿ ರುಚಿ ನೋಡಲು ಪ್ರಾರಂಭಿಸಿದೊಡನೆ ಒಂದು ರೀತಿಯಾಗಿ ಈ ತೊಡಕು ತೀರಿದಂತೆ ತೋರಿತು. ಆದರೆ ನೈಜವಾಗಿ ಈ ರೀತಿಯಲ್ಲಿ ನೆರವೇರಲಿಲ್ಲ; ಬಿರುಗಾಳಿಯು ಬೇರೆ ದಾರಿಯಲ್ಲಿ ತಿರುಗಿಬಿಟ್ಟಿತು.

ರಾಜನು ತನ್ನ ಕೈಯಲ್ಲಿದ್ದ ಬಿಸ್ಕತ್ತಿನ ಚೂರನ್ನು ಬಾಯಲ್ಲಿ ಹಾಕಿಕೊಂಡು ನುಂಗಿಬಿಟ್ಟು, ತನ್ನ ಸ್ನೇಹಿತನ ಕಡೆಗೆ ಕೈಯನ್ನು ನೀಡಿ ''ತಾ'' ಎಂದಾಗ ನಾವೆಲ್ಲರೂ ಬೆಚ್ಚಿಬಿದ್ದೆವು, ''ಕೊಟ್ಟು ಕೇಳುವ'' ಸಮತಾ ಗುಣವನ್ನು ಭಗವಂತನು ಮನುಷ್ಯರಿಗೆ ಸ್ವಾಭಾವಿಕವಾಗಿಯೇ ಕೊಟ್ಟಿರುವನೋ ಎಂಬಂತೆ !

''ಛೀ ಕತ್ತೆ, ಅದು ನಿನಗೆ ಬೇಡ.'' ಎಂದು ಲಕ್ಷ್ಮಿ ಆ ಪುಟ್ಟಕೈಯನ್ನು ಸೆಳೆದುಕೊಂಡಳು. ರಾಜನು ಪುನಃ ಕೈನೀಡಿ, ''ತಾ'' ಎಂದನು. ಬಡ ಸ್ನೇಹಿತನಾದ ಮಗುವು ತನ್ನ ತಾಯಿಯ ಮುಖವನ್ನು ನೋಡಿತು. ''ಕೊಡಬಹುದೇ ?'' ಎಂದೇ ಅದರ ಮನಸ್ಸಿನಲ್ಲಿ ಪ್ರಶ್ನೆ ಹುಟ್ಟಿರಬೇಕು.

''ನಿನಗೆ ಬೇಡ, ಸಾಮಿ'' ಎಂದು ಇದಿರಲ್ಲಿದ್ದ ಹೆಂಗಸು ರಾಜನಿಗೆ ಹೇಳಿದಳು.

ಅವನು ಕೇಳಲಿಲ್ಲ. "ತಾ" ಎಂದು ಪುನಃ ಆ ಮಗುವಿನ ಕಡೆಗೆ ಕೈ ನೀಡಿದನು. ಈಗ ಅವನ ಧ್ವನಿಯಲ್ಲಿ ಹಠ ಧ್ವನಿಸಿತು.

"ಅದು ಅಸಹ್ಯ ; ಬೇಡ. ಇಕೋ ಬಿಸ್ಕತ್ತು" ಎಂದು ಅಜ್ಜಿಯು ಮತ್ತೊಂದು ಬಿಸ್ಕತ್ತನ್ನು ತೆಗೆದು ಅವನ ಕೈಯಲ್ಲಿಟ್ಟಳು.

ರಾಜನು ಅದನ್ನು ಬಿಸಾಡಿಬಿಟ್ಟು, "ಪಾಪಾ, ತಿನ್ನಿ ತಾ" ಎಂಬ ಪಲ್ಲವಿಯನ್ನು ಪ್ರಾರಂಭಿಸಿಬಿಟ್ಟನು. ಲಕ್ಷ್ಮಿಗಂತೂ ಕೋಪ ಉಕ್ಕಿಬಂದಿತು.

ಮುಂಚೆ ರಾಜನು ಕಚ್ಚಿಕೊಟ್ಟ ಬಿಸ್ಕತ್ತನ್ನು ಅವನ ಸ್ನೇಹಿತನಾದ ಮಗುವು ಅದೆಷ್ಟೊಂದು ಆಸಕ್ತಿಯಿಂದ ತೆಗೆದುಕೊಂಡಿತು ! ಅದರ ತಾಯಿ ಅದೆಷ್ಟೊಂದು ಪ್ರಫುಲ್ಲಿತಳಾದಳು ! ಈಗ ಮಾತ್ರ ಈ ಸಿಟ್ಟೇತಕ್ಕೆ ? ಎಂದು ನಾನು ಚಿಂತಿಸತೊಡಗಿದೆನು.

ರಾಜನು ಅಳತೊಡಗಿದನು. ಲಕ್ಷ್ಮಿ ಒಳ್ಳೆಯ ಮಾತಿನಲ್ಲಿ ಹೇಳಿದಳು, ಗದರಿಸಿದಳು. ಅಜ್ಜಿ ಏನೇನನ್ನೋ ಹೇಳಿ ಸಂತೈಸತೊಡಗಿದಳು. ಎದುರಲ್ಲಿದ್ದ ಹೆಂಗಸೂ ಸಮಾಧಾನ ಹೇಳಿದಳು. ಅವೆಲ್ಲವೂ ರಾಜನಿಗೆ ಬಗೆಹರಿಯಲಿಲ್ಲ. ಗಟ್ಟಿಯಾಗಿ ಅಳತೊಡಗಿದನು. ಲಕ್ಷ್ಮಿಗೆ ಕೋಪ ಅಧಿಕವಾಯಿತು. ರಾಜನನ್ನು ಹೊಡೆದಳು. ಅದುವರೆಗೂ ಗಂಭೀರವಾಗಿ ಕುಳಿತಿದ್ದವಳಿಗೆ ಈಗ ಏನು ಮಾಡುವುದೆಂಬುದೇ ತೋರದೆ ಹೋಯಿತು. ಆ ತಿಂಡಿಯನ್ನು ತೆಗೆದುಕೊಡುವುದೇ?- ಅವಳ ದೇಹವೆಲ್ಲವೂ ಜುಗುಪ್ಸೆಯಿಂದ ನಡುಗಲಾರಂಭಿಸಿತು.

"ದರಿದ್ರ? ಇಲ್ಲಿಗೇಕೆ ಶನಿಯಂತೆ ಬಂದು ಕುಳಿತಿದೆ?–" ಮಿತಿ ಮೀರಿದ ಕೋಪದ ದೆಸೆಯಿಂದ ಅವಳ ಬಾಯಿಂದ ಹೊರಟ ಈ ಮಾತುಗಳು ರಾಜನನ್ನು ಕುರಿತಲ್ಲ, ಇದಿರಲ್ಲಿದ್ದ ಬಡ ಜೀವಿಗಳನ್ನು ಕುರಿತು.

ಯಾರು ಮುಂಚೆ ಬಂದು ಕುಳಿತಿದ್ದವರು ? ಯಾರು ಅನಂತರ ಬಂದವರು ? ಯಾರು ಇದಕ್ಕೆ ಕಾರಣರು ! ಈ ವಿಚಾರಣೆಯ ಇದಿರಿನಲ್ಲಿ ಲಕ್ಷ್ಮಿಯ ನ್ಯಾಯವು ಅನ್ವಯಿಸುವುದೇನು ?

"ಅನಿಷ್ಟ ! ಮಗುವನ್ನು ಗಲಭೆಗೊಳಿಸಲು ಬಂದು ಕುಳಿತಿದೆ. ನಾಶವಾಗಿ ಹೋಗಲಿ !"

ದೀನಳಾದ ತಾಯಿಯ ಎದೆಯು ಡಬಡಬನೆ ಹೊಡೆದುಕೊಳ್ಳಲು ತೊಡಗಿತು. ''ಏನನ್ನು ತಾಯಿ ಹೇಳಿಕೊಳ್ಳುತ್ತಿರುವಿರಿ ? ಯಾರ ತಪ್ಪು ? ನನ್ನ ಮಗು ಏನು ತಾಯಿ ಮಾಡಿತು?'' ಎಂದು ಅವಳು ಬಾಯನ್ನು ತೆರೆಯುವುದರೊಳಗಾಗಿ ಲಕ್ಷ್ಮಿಗೆ ಕಣ್ಣು ತಲೆ ತಿಳಿಯದಂತಹ ಕ್ರೋಧವು ತಲೆದೋರಿತು. ''ಛೀ ನಾಯೀ ! ನಿನ್ನನ್ನು ಇಲ್ಲಿ ಯಾರೇ ಕುಳಿತುಕೊಳ್ಳುವಂತೆ ಹೇಳಿದುದು ? ಮಾತನಾಡಲು ಬಂದುಬಿಟ್ಟೆಯೇನು ? ಅದೆಲ್ಲಿಯಾದರೂ ಕಣ್ಣಿಗೆ ಕಾಣದ ಸ್ಥಳಕ್ಕೆ ತೊಲಗುವುದಕ್ಕೇನು ಕೇಡು ?'' ಎಂದು ಅಹಂಕಾರವೂ ಕ್ರೋಧವೂ ಬೆರೆತ ಧ್ವನಿಯಲ್ಲಿ ಬೈಯಲು ಪ್ರಾರಂಭಿಸಿಬಿಟ್ಟಳು. ಈ ಗಲಭೆಯಲ್ಲಿ ರಾಜನ ರೋದನವು ಕೊನೆಗಾಣಲಿಲ್ಲ. ಅತ್ತು ಅತ್ತು ಮುಖ ಕೆಂಪೇರಿತು. ಒಂದೇ ಗಲಭೆ. ಪಾಪ ! ದೀನಳಾದ ಆ ಮಾತೆಯು ಮಾತನ್ನು ಅಷ್ಟಕ್ಕೇ ನಿಲ್ಲಿಸಿಬಿಟ್ಟಳು. ಅಕ್ಕಪಕ್ಕದಲ್ಲಿದ್ದವರು ಸಮಾಧಾನ ಹೇಳಿಯೂ, ಖಂಡಿಸಿಯೂ ಲಕ್ಷ್ಮಿಯನ್ನು ಅಡಗಿಸಿದರು. ಆದರೆ ರಾಜನನ್ನು ಅಡಗಿಸಲು ಯಾರ ಕೈಯಲ್ಲೂ ಆಗಲಿಲ್ಲ. ಇಷ್ಟಕ್ಕೂ ಕಾರಣವಾದ ಆ ಹಳಸಲುವಡೆಯು ಆ ಮಗುವಿನ ಹೊಟ್ಟೆಯಲ್ಲಿ ಜೀರ್ಣಿಸಿಯೂ ಹೋಗಿರಬೇಕು.

ಗಾಡಿಯಲ್ಲಿ ಜರುಗಿದ ಸಂಗತಿಯನ್ನು ನೋಡಲಾರದೆ ಕುಳಿತಿದ್ದೆನು. ''ಕುಳಿತ್ತಳ್ಳಿ'' ಸ್ಟೇಷನ್ ಬಂದಿತು. ಒಬ್ಬನು ಬಾಳೆಯ ಹಣ್ಣನ್ನು ಮಾರುತ್ತಾ ಬಂದನು. ಆಗ ನನಗೊಂದು ಯೋಚನೆಯು ಹೊಳೆಯಿತು. ಅವನನ್ನು ಕರೆದು ನಾನು ಎರಡು ಹಣ್ಣುಗಳನ್ನು ಕೊಂಡೆನು. ಒಂದನ್ನು ಮಗುವಿನ ಕೈಯಲ್ಲಿ ಕೊಟ್ಟು ರಾಜನನ್ನು ಕುರಿತು, ''ತೆಗೆದುಕೋ ಮಗು'' ಎಂದೆ. ಏನಾಶ್ಚರ್ಯ ! ಅವನು ಒಂದೇ ಸಮನೆ ನೆಗೆದು ಅದನ್ನು ತನ್ನ ಸ್ನೇಹಿತನ ಕೈಯಿಂದ ತೆಗೆದುಕೊಂಡನು. ಆ ಮಗುವೂ ಸಹ ಬಹಳ ಆಶೆಯಿಂದ ಕೈ ನೀಡಿತು. ತಕ್ಷಣ ಅದರ ಕೈಗೆ ಮತ್ತೊಂದು ಹಣ್ಣನ್ನು ಕೊಟ್ಟು ತಿರುಗಿ ''ರಾಜನು ಅದನ್ನು ತಿನ್ನಲಿ ತಾಯಿ !'' ಎಂದು ಲಕ್ಷ್ಮಿಯ ಹತ್ತಿರದಲ್ಲಿ ವಿಜ್ಞಾಪಿಸಿಕೊಂಡೆನು.

ರಾಜನ ಅಳು ಇದ್ದ ಸ್ಥಳವೇ ತಿಳಿಯದ ಹಾಗೆ ಮಾಯವಾಯಿತು. ಬಾಳೆಯ ಹಣ್ಣನ್ನು ಅಜ್ಜಿಗೆ ತೋರಿಸಿ, ''ಪಾಪಾ, ಅಣ್ಣು'' ಎಂದು ಹೇಳಿ

ತಿನ್ನಲು ತೊಡಗಿದನು. ಇದಿರು ಹಲಗೆಯಲ್ಲಿ ತನ್ನ ಮನಸ್ಸಿನಲ್ಲಿ ಹೊಮ್ಮುವ ಯೋಚನಾಂತರಗಗಳನ್ನು ಮಾತಿನ ರೂಪದಲ್ಲೋ ಅಭಿನಯದ ರೂಪದಲ್ಲಿಯೋ ತೋರಿಸಲಾರದ ಆ ಬಡ ಮಗು ಸಹ ಅತ್ಯಾನಂದದಿಂದ ಹಣ್ಣನ್ನು ಸವಿಯತೊಡಗಿತು.

ಆಗ ಇಂತಹುದೆಂದು ಹೇಳಲಸಾಧ್ಯವಾದ ಸಂಕಟವನ್ನು ಅನುಭವಿಸುತ್ತಿದ್ದ ಆ ಮಗುವಿನ ತಾಯಿ ರಾಜನನ್ನೂ ತನ್ನ ಮಗುವನ್ನೂ ನೋಡಿ ನಿಟ್ಟುಸಿರನ್ನು ಬಿಟ್ಟಳು.

# ನವರಾತ್ರಿಯ ಗೊಂಬೆ

ನವರಾತ್ರಿಯ ಕಾಲದಲ್ಲಿ ಸಂಪಾದಿಸುವುದೇ ಶಾಶ್ವತವಾಗಿ ನಿಲ್ಲುವುದು. ಹಗಲಿರುಳೆನ್ನದೆ ದುಡಿದರೆ ಫಲವುಂಟು. ಅವಳಿಗೆ ಅವಳ ಕೈಯೇ ಆಸ್ತಿ. ತನ್ನ ಕೈ ಚತುರತೆಯಿಂದ ಅವಳು ಜೀವಿಸುತ್ತಿದ್ದಳು. ಗಂಡನಿದ್ದ ಕಾಲದಲ್ಲಿ ಅವಳಿದ್ದ ಸ್ಥಿತಿಯೇ ಬೇರೆ; ಈಗ ಇರುವ ಸ್ಥಿತಿಯೇ ಬೇರೆ. ಎರಡು ಸಮಯಗಳಲ್ಲಿಯೂ ಅವಳು ಮನಸ್ಸಿಟ್ಟು ದುಡಿಯುವದರಲ್ಲಿ ಮಾತ್ರ ವಂಚನೆಮಾಡುವುದಿಲ್ಲ. ಮಣ್ಣಿಂದ ಗೊಂಬೆಗಳನ್ನು ಮಾಡಿ ಬಣ್ಣ ಹಚ್ಚಿ ಮಾರಿ ಜೀವನ ನಡೆಯಿಸುತ್ತಿದ್ದಳು. ಅವಳಿಗೆ ಬದುಕಿನಲ್ಲಿ ನಂಬಿಕೆಯನ್ನು ಉಂಟುಮಾಡುವವನು ಆ ಚಿಕ್ಕ ಮಗುವಾದ ಸಿದ್ದನೊಬ್ಬನೇ. ಅವನು ಒಂದು ವರ್ಷದ ಮಗುವಾಗಿದ್ದಾಗ ತಂದೆ ತೀರಿಕೊಂಡಿದ್ದನು. ಈಗ ಅವನಿಗೆ ತಂದೆಯ ವಿಷಯವಾಗಿ ಏನೊಂದೂ ಗೊತ್ತಿರಲಿಲ್ಲ. ಪ್ರಪಂಚವೆಲ್ಲವೂ ತಾಯಿಯಲ್ಲಿ ಅಡಗಿರುವುದೆಂದು ನಂಬಿದ್ದನು.

ಸುಬ್ಬಮ್ಮನು ಈ ನವರಾತ್ರಿಯಲ್ಲಿ ಸ್ವಲ್ಪ ಹಣ ಮಿಗಿಸಿದಲ್ಲಿ ಮಗನನ್ನು ಪಾಠಶಾಲೆಗೆ ಸೇರಿಸಿ ಅಕ್ಷರ ಕಲಿಸೋಣವೆಂದು ಆಲೋಚಿಸಿದ್ದಳು. ಅವನಿಗೆ ಆಗ ತಾನೇ ಐದನೆಯ ವರ್ಷವಾರಂಭವಾದರೂ ಅವನ ಹುರುಪೂ ಚಟುವಟಿಕೆಯೂ ಅವಳ ಹೃದಯದಲ್ಲಿ ಒಂದು ದೊಡ್ಡ ಆಂದೋಲನವನ್ನೆಬ್ಬಿಸಿದವು. ಗೊಂಬೆ ಮಾಡುವ ಮನೆಯಲ್ಲಿ ಹುಟ್ಟಿದರೇನೀಗ? ಅವನು ಓದಿ ಪದವೀಧರನಾಗಿ ಡೆಪ್ಯುಟೀ ಕಮೀಷನರಾಗಬಾರದೇನು? ಮಣ್ಣಿನ ಗೊಂಬೆಯನ್ನು ಮಾಡುತ್ತಲಿದ್ದ ಶಾಲಿವಾಹನನು ದೊಡ್ಡ ಅರಸನಾದನೆಂಬ ಕಥೆಯನ್ನು ಅವಳು ಕೇಳಿದ್ದಳು. ಆದುದರಿಂದ ತನ್ನ ನಂಬಿಕೆ ಸಾಧ್ಯವಾದುದೆಂದೇ ಅವಳು ನಿಶ್ಚಯಿಸಿದಳು. ತನ್ನ ಕಣ್ಮಣಿಯಂತೆ ಸಿದ್ದನನ್ನು ಸಾಕುತ್ತಿದ್ದಳು.

ಅವನಿಗೆ ಗೊಂಬೆ ಮಾಡಲು ಬರುವುದು. ಅವನ ಆಶೆಯಲ್ಲಿ, ಆಸರೆಯಲ್ಲಿ, ದುಡಿತದಲ್ಲಿ ಏನೊಂದೂ ಕೊರತೆಯಿಲ್ಲ. ಆದರೆ ಆ ಗೊಂಬೆಯು ಯಾವುದೋ ಒಂದು ಮುದ್ದೆಯಾಗಿರುವುದು. ಅದಕ್ಕೆ ಕೈಕಾಲು ಮುಖವೆಲ್ಲವೂ ಆ ಮಗುವಿನ ಕಲ್ಪನೆಯ ಮಾತ್ರದಲ್ಲಿಯೇ ನಿಂತು ಬಿಡುವುದು. "ನಿನ್ನ ಬೊಂಬೆ ಚೆನ್ನಾಗಿಲ್ಲ." ಎಂದು ಸುಬ್ಬಮ್ಮ ಹೇಳುತ್ತಿರಲಿಲ್ಲ. "ಬಹಳ ಚೆನ್ನಾಗಿದೆ! ಪ್ರಾಯ ಬಂದ ಮೇಲೆ ನೀನು ಬಹಳ ಜಾಣನಾಗುತ್ತೀ. ಗೊಂಬೆಗೆ ಒಳ್ಳೆಯ ಗಿರಾಕಿ ಏರ್ಪಡುವುದು." ಎಂದು ಹೇಳುವಳು; ಮರುಕ್ಷಣವೇ "ಛೀ, ಇದು ಎಂತಹ ತಿಳಿಗೇಡಿತನ! ಈ ಜೀವನವು ಈ ಮಗುವಿಗೂ ಒದಗಬೇಕೆ? ವಿದ್ಯೆಕಲಿತು ಉದ್ಯೋಗವನ್ನು ಮಾಡುವವನಲ್ಲವೇ ಇವನು!" ಎಂದು ಆಲೋಚಿಸುವಳು; ಆ ಭಾವನೆಯಲ್ಲಿಯೇ ಅವಳಿಗೊಂದು ರೀತಿಯ ಕುತೂಹಲವುಂಟಾಗುವುದು.

"ಅಮ್ಮಾ, ಅಮ್ಮಾ, ಇಕೋ ನೋಡು ನನ್ನ ಗಣೇಶ!" ಎಂದು ತೋರಿಸುವನು ಮಗು. ಅದು ಗಣೇಶನಂತೆಯೂ ಇರದು, ಮಂಗದಂತೆಯೂ ಇರದು; ಬರಿಯ ಜೇಡಿ ಮಣ್ಣಿನ ಉಂಡೆಯಷ್ಟೆ; ಅಷ್ಟಕ್ಕೂ ಸೊಟ್ಟಸೊಟ್ಟನಾದ ಒಂದು ಉಂಡೆ.

"ಚೆನ್ನಾಗಿದೆ!" ಎಂದು ಅಮ್ಮ ಹೇಳುವಳು. ಅಮ್ಮನಿಗಿಂತ ಹಿರಿಯರಾರೂ ಇಲ್ಲ ಅವನಿಗೆ. ಆದುದರಿಂದ ಆ ತೀರ್ಪನ್ನು ಕೇಳಿ ಅವನ ಮೈಯುಬ್ಬುವುದು.

* * * *

ಸಿದ್ಧನು ಮಾಡಿದ ಗೊಂಬೆಗಳು—ಅವನಿಗೆ ಅವು ಗೊಂಬೆಗಳಲ್ಲವೇ?- ನಾಲ್ಕೈದು ಇದ್ದುವು. ಒಂದು ದಿವಸ ಅವನು ತನ್ನ ತಾಯಿಯ ಹತ್ತಿರದಲ್ಲಿ ಮುದ್ದಾಡುತ್ತಾ ಕೇಳಿದನು.

"ಅಮ್ಮಾ, ನೀನು ಈ ಗೊಂಬೆಗಳನ್ನೂ ಮಾರಿಕೊಂಡು ಬರಬಾರದೇ?"

ತಾಯಿಗೆ ಸ್ವಲ್ಪ ಆಶ್ಚರ್ಯವಾಯಿತು.

"ನಿನ್ನ ಗೊಂಬೆಗಳನ್ನು ಮಾರಿ ದುಡ್ಡು ತರುತ್ತೀಯಲ್ಲಾ; ಇವನ್ನೂ ಮಾರಿಕೊಂಡು ಬಾ."

"ಆಗಲಿ, ಕಂದಾ."

"ಎಲ್ಲ ಗೊಂಬೆಗಳನ್ನೂ ಮಾರಿಬಿಡುತ್ತೀಯಾ ?"

"ಮಾರೋಣ, ಚಿನ್ನಾ"

ಅವನಿಗುಂಟಾದ ಆನಂದವನ್ನು ಆಗ ನೋಡಬೇಕಲ್ಲಾ!

ಅವನು ಪ್ರತಿನಿತ್ಯವೂ ಸಂಧ್ಯಾಕಾಲದಲ್ಲಿ ಅಮ್ಮನು ಅಂಗಡಿಯ ಬೀದಿಗೆ ಗೊಂಬೆಗಳನ್ನು ಮಾರಲು ತೆಗೆದುಕೊಂಡು ಹೋಗುವಾಗ ತನ್ನ ಗೊಂಬೆಗಳನ್ನೂ ಮಾರಿ ಬರಬೇಕೆಂದು ಒತ್ತಾಯಪಡಿಸುತ್ತಿದ್ದನು. ಅವುಗಳನ್ನು ಅವಳು ಹೇಗೆ ಮಾರಲಾದೀತು! ಎಷ್ಟೆಷ್ಟೋ ನೆಪ ಹೇಳಿ ತಪ್ಪಿಸಿಕೊಳ್ಳುತ್ತಿದ್ದಳು. ಹೀಗೆ ನಿಧಾನಮಾಡುತ್ತಲಿರುವುದು ಅವನಿಗೆ ಜುಗುಪ್ಸೆಯುಂಟು ಮಾಡಿತು. ಅವನಿಗೊಂದು ಆಲೋಚನೆ ಹೊಳೆಯಿತು; ತಾನೇ ತೆಗೆದುಕೊಂಡು ಹೋಗಿ ಮಾರಬಾರದೇಕೆ ಎಂದು ಯೋಚಿಸಿದನು.

೨

ಅಂಗಡಿ ಬೀದಿಯಲ್ಲಿ ಸಂಧ್ಯಾಕಾಲ ಆ ಚಿಕ್ಕ ಮಗುವು ತನ್ನ ಪುಟಾಣಿ ಕೈಯಲ್ಲಿ ಒಂದು ಒಣಗಿ ಹೋದ ಮಣ್ಣಿನ ಉಂಡೆಯನ್ನಿಟ್ಟುಕೊಂಡು ನಿಂತಿದ್ದನು. ಅದರ ಮೇಲೆ ಬಣ್ಣಗಳು ಅಚ್ಚುಕಟ್ಟಿಲ್ಲದೆ ಬಳಿಯಲ್ಪಟ್ಟಿದ್ದವು. ನವರಾತ್ರಿಯ ಸಮಯ. ಎಷ್ಟೋ ಮಂದಿ ಬೊಂಬೆಗಳನ್ನು ಮಾರುತ್ತಿದ್ದರು. ಸಿದ್ದನು ಒಂದು ಮೂಲೆಯಲ್ಲಿ ನಿಂತಿದ್ದನು.

"ಗೊಂಬೇ ಬೇಕೆ ಗೊಂಬೇ!" ಎಂದು ಅವನು ತನ್ನ ಮಧುರವಾದ ಸಣ್ಣ ಧ್ವನಿಯಲ್ಲಿ ಕೂಗಿದನು. ಯಾರಾದರೂ ತಿಳಿದವರು ನೋಡಿಬಿಟ್ಟಾರೆಂಬ ಭೀತಿಯು ಒಳಗೊಳಗೇ ಕುದಿಯುತ್ತಿದ್ದಿತು. ಗೊಂಬೆಗಳನ್ನು ಕೊಳ್ಳಲು ಅಲ್ಲಿಗೆ ಬಂದವರು ಅವನ ಕೈಯಲ್ಲಿರುವುದನ್ನು ನೋಡಿದರು. ಅವರಿಗೆ ಮಿತಿ ಮೀರಿದ ನಗು ಬಂದಿತು.

"ಇದೇನು, ಮಗೂ?" ಎಂದು ಅವರು ಕೇಳಿದರು. ಸಿದ್ದನೇನಾದರೊಂದನ್ನು ಹೇಳುವನು. ಅದನ್ನು ಕೇಳಿ ಅವರು ನಗುನಗುತ್ತಾ ಹೊರಟು ಹೋಗುವರು. ಅವರ ನಗುವಿನ ಅರ್ಥವೇನೆಂಬುದನ್ನು ಅವನು

ಅರಿಯಲಾರನು. "ನಮ್ಮಮ್ಮನೇ ಇದನ್ನು ಒಳ್ಳೆಯ ಗೊಂಬೆಯೆಂದು ಹೇಳಿದಳಲ್ಲಾ; ಇದನ್ನು ಏಕೆ ಇವರುಗಳಾರೂ ಕೊಂಡುಕೊಳ್ಳುವುದಿಲ್ಲ?" ಎಂದು ಚಿಂತಿಸಿದನು. ಸತ್ಯವೇ; ಅದು ಅವನಿಗೆ ಒಳ್ಳೆಯ ಗೊಂಬೆ; ಅವನ ಅಮ್ಮನಿಗೂ ಸುಂದರವಾದ ಗೊಂಬೆಯೇ ಹೌದು. ಮಿಕ್ಕವರ ಕಣ್ಣುಗಳಿಗೆ ಅದು ಆ ರೀತಿಯಾಗಿ ತೊರಲಿಲ್ಲವಲ್ಲ.

ಕಾಲುಗಳು ನೋಯುವವರೆಗೂ ನಿಂತಿದ್ದೊಂದೇ ಲಾಭ; ಗಂಟಲು ನೋಯಿಸಿಕೊಂಡು ಕಿರಿಚಿಯೂ ಪ್ರಯೋಜನವಿಲ್ಲ. ಬಂದವರೆಲ್ಲರೂ ಆ ಮಗುವಿನ ಕೈಯಲ್ಲಿದ್ದ ಮಣ್ಣಿನ ಉಂಡೆಯನ್ನು ಮಾತ್ರವೇ ನೋಡಿದರು; ಅದರ ಮೇಲೆ ಬಳಿಯಲ್ಪಟ್ಟಿದ್ದ ಬಣ್ಣಗಳ ಅವಲಕ್ಷಣ ಮಾತ್ರವೇ ಅವರಿಗೆ ಗೋಚರವಾಯಿತು. ಆ ಚಿಕ್ಕ ಮಗು ತನ್ನ ಮನಸ್ಸೆಲ್ಲವನ್ನೂ ನಾಟಿಸಿ ತನ್ನ ಶಕ್ತಿಯೆಲ್ಲವನ್ನೂ ಒಂದುಗೂಡಿಸಿ ಅದನ್ನು ಮಾಡಿದ್ದನೆಂದು ಅವರು ತಿಳಿಯಲಿಲ್ಲ. ಪಾಪ! ಅವರೆಲ್ಲರೂ ನಗುವಾಗ ಆ ಮಗುವಿನ ಹೃದಯ ದಲ್ಲೊಂದು ಹರಿತವಾದ ಶೂಲ ಚುಚ್ಚಿದಂತೆ ಯಾತನೆಯುಂಟಾಗುವುದು.

* * * *

ಆಶೆ ನೆರವೇರದೆ ಖಿನ್ನಮನಸ್ಕನಾಗಿ ಅವನು ಮನೆಗೆ ಹಿಂದಿರುಗುವುದ ರಲ್ಲಿದ್ದನು. ಆಗ ವಯೋಧಿಕರೊರ್ವರು ಅಲ್ಲಿಗೆ ಬಂದರು. ಅವರ ಕಣ್ಣು ಸಿದ್ದನ ಕೈಯಲ್ಲಿದ್ದ ವಸ್ತುವಿನ ಹೊರಗಡೆಯ ರೂಪಲಾವಣ್ಯವನ್ನು ಮಾತ್ರ ನೋಡಲಿಲ್ಲ; ಅದರ ಒಳಭಾಗವನ್ನು ಹಾದು ಹೋಗಿ ನೋಡಿದವು. "ಇದೆಂತಹುದು ಮಗೂ?" ಎಂದು ಅವರು ಕೇಳಿದರು.

"ಗಣೇಶನ ಗೊಂಬೆ, ನಾನು ಮಾಡಿದ್ದು" ಎಂದು ಗದ್ಗದ ಸ್ವರದಲ್ಲಿ ನುಡಿದನು. ಅಷ್ಟು ಹೊತ್ತಿನವರೆಗೆ ಈ ಲೋಕದ ಪರಿಹಾಸ್ಯದ ಅಲೆಗಳಿಂದ ಬಡಿಯಲ್ಪಟ್ಟಿದ್ದ ಅವನ ಹುರುಪು ಆಗ ಸ್ವಲ್ಪ ಮಾತ್ರವೇ ಹೊರಹೊಮ್ಮಿತು.

"ಹಾಗೇನು! ಏನು ಬೆಲೆ, ಮಗೂ?"

ಈ ಪ್ರಶ್ನೆಯನ್ನು ಇದುವರೆಗೂ ಯಾರೊಬ್ಬರೂ ಕೇಳಿರಲಿಲ್ಲ. ಮಗು ಇದಕ್ಕೆ ತಯಾರಾಗಿರಲಿಲ್ಲ. ಏನು ಬೆಲೆ? . . . ಏನು ಹೇಳುವುದು? ಅವನಿಗೊಂದೂ ತೋರಲಿಲ್ಲ. ಮಗುವಿನಿಂದ ಉತ್ತರ ಬರಲು ನಿಧಾನವಾ

ಯಿತು. ಮುದುಕರು ಅದಕ್ಕಾಗಿ ಕಾದಿರಲಿಲ್ಲ. "ಸರಿ, ಇದನ್ನು ತೆಗೆದುಕೋ; ಗೊಂಬೆಯನ್ನು ನಾನು ತೆಗೆದುಕೊಳ್ಳುತ್ತೇನೆ", ಎಂದು ನಾಲ್ಕಾಣೆಯ ನಾಣ್ಯವೊಂದನ್ನು ಮಗುವಿನ ಕೈಯಲ್ಲಿ ಇಟ್ಟು ಆ ಜೇಡಿಯ ಮಣ್ಣಿನ ಉಂಡೆಯನ್ನು ಅವರು ಕೊಂಡುಕೊಂಡರು.

ಸಿದ್ದನ ವದನ ಅರಳಿತು. ಅವನ ಜೀವಮಾನದಲ್ಲಿ ಅದೊಂದು ದೊಡ್ಡ ಆನಂದದ ವಿಷಯವಲ್ಲವೆ? ತನ್ನ ಗೊಂಬೆ ಕೂಡ ಮಾರಾಟವಾಯಿತು; ಅಷ್ಟೊಂದು ಹೊತ್ತಿನವರೆಗೆ ಶ್ರಮಪಟ್ಟು ಕಾದಿದ್ದುದಕ್ಕೆ ತಕ್ಕ ಫಲ ಅವನಿಗೆ ದೊರಕಿತು. ಅಲ್ಲಿಂದ ಒಂದೇ ಸಮನೆ ಓಟ!

"ಅಮ್ಮಾ! ಅಮ್ಮಾ! ಮಾರಿಬಿಟ್ಟೆ. ಇಕೋ ದುಡ್ಡು!" ಎಂದು ಅಮ್ಮನ ಕೈಯಲ್ಲಿ ದುಡ್ಡನ್ನು ಕೊಟ್ಟನು ಅವನು.

ಮಗುವೆಲ್ಲಿಯೋ ಕಾಣಲಿಲ್ಲವಲ್ಲಾ ಎಂದು ಚಿಂತಿಸುತ್ತಿದ್ದ ಅವಳಿಗೆ ಅವನ ವೇಗವಾದ ಮಾತುಗಳು ಇತ್ಯರ್ಥವಾಗಲಿಲ್ಲ. ಅವನು ಎಷ್ಟು ಸಾರಿ ಹೇಳಿದರೂ ಕೂಡ ಅವಳಿಗೆ ನಂಬಿಕೆಯುಂಟಾಗಲಿಲ್ಲ. "ಅದನ್ನು ಹೋಗಿ ಕೊಂಡುಕೊಳ್ಳುವವರಾರು?" ಎಂದು ಅವಳು ಭಾವಿಸಿದಳು. ಆದರೆ ಇವನಿಗೆ ದುಡ್ಡು ಎಲ್ಲಿಂದ ದೊರಕಿರಬೇಕು? ಈ ಪ್ರಶ್ನೆಗೆ ಉತ್ತರ ತಿಳಿಯಲಿಲ್ಲ.

"ನನ್ನ ಚಿನ್ನಾ, ನಿನ್ನ ಗೊಂಬೆಯನ್ನು ಕೊಂಡವರಾರು?" ಎಂದು ಕೇಳಿದಳು.

"ಯಾರೋ ಒಬ್ಬ ಅಜ್ಜನು ಕೊಂಡುಕೊಂಡರು, ಅಮ್ಮಾ" ಎಂದನು ಅವನು; "ನಾಳೆಯೂ ಮಾರುವುದಕ್ಕೆ ಹೋಗುತ್ತೇನೆ" ಎಂದು ಹೇಳಿ, ಕುಣಿದಾಡಿದನು.

ಮರುದಿನ ಸಂಜೆ ಅವನು ತಾನು ಮಾಡಿದ 'ರಾಜಾ' ಗೊಂಬೆಯನ್ನು ತೆಗೆದುಕೊಂಡು ಹೋದನು. ಹಿಂದಿನ ದಿವಸ ಬಂದ ಮುದುಕರು ಅಂದೂ ಸಹ ಆ ಗೊಂಬೆಯನ್ನು ಕೊಂಡುಕೊಂಡು ಹೋದರು. ಅಂದು ಸುಬ್ಬಮ್ಮನು ತನ್ನ ಮಗು ನಿಜವಾಗಿಯೂ ಗೊಂಬೆಯನ್ನು ಮಾರಿ ಬರುತ್ತಾನೆಂಬುದನ್ನು ಅರಿತಳು. "ಈ ಮಗು ಒಳ್ಳೆಯ ಕೈರಾಶಿಯುಳ್ಳವನಾಗಿದ್ದಾನೆ. ತನ್ನ ಮಣ್ಣುಂಡೆಗೆ ನಾಲ್ಕಾಣೆಗಳನ್ನು ಪಡೆಯುವವನು ನಮ್ಮ ಸುಂದರವಾದ

ಗೊಂಬೆಗಳಿಗೆ ಒಳ್ಳೆಯ ಗಿರಾಕಿಯನ್ನು ತರುವನು'' ಎಂಬುದಾಗಿ ಅವಳ ಮನಸ್ಸಿನಲ್ಲಿ ಆಶೆಯೊಂದು ಮೂಡಿತು. ಓದಿಸುವುದನ್ನೂ ಉದ್ಯೋಗಕ್ಕೆ ಸೇರಿಸುವುದನ್ನೂ ತತ್ಕಾಲಕ್ಕೆ ಅವಳು ಮರೆತಳು. ತನ್ನ ಗೊಂಬೆಗಳನ್ನು ಅವನು ಸಾಯಂಕಾಲ ಮಾರುವ ಹಾಗೂ ಕೊಳ್ಳುವವರು ಅವನಿಗಾಗಿ ತುಂಬ ಹಣಕೊಡುವ ಹಾಗೂ ಅದರಿಂದ ಅವಳು ಹಣವಂತಳಾಗುವ ಹಾಗೂ ಮನೋರಾಜ್ಯವನ್ನು ಅವಳು ಸೃಷ್ಟಿಸಿಕೊಂಡಳು.

''ಕಂದಾ, ನಾಳೆ ನಾನೊಂದು ಗೊಂಬೆಯನ್ನು ಕೊಡುತ್ತೇನೆ, ಅದನ್ನು ತೆಗೆದುಕೊಂಡು ಹೋಗಿ ಮಾರಿಕೊಂಡು ಬಾ. ತುಂಬ ದುಡ್ಡು ಸಿಗುವುದು" ಎಂದಳು ಸುಬ್ಬಮ್ಮ. ಮಗು ಸಮ್ಮತಿಸಿದನು.

೩

ಸಂಧ್ಯಾಕಾಲ. ಮಗುವಿಗೆ ಚೆನ್ನಾಗಿ ಪಂಚೆಯುಡಿಸಿ ಕೈಯಲ್ಲಿ ಅಂದವಾದೊಂದು ರಾಣಿಯ ಗೊಂಬೆಯನ್ನು ಕೊಟ್ಟು ಅವನನ್ನು ಅಂಗದಿಯ ಬೀದಿಗೆ ಕಳುಹಿಸಿದಳು ಸುಬ್ಬಮ್ಮ. ಅವನು ಹೊರಟು ಹೋದಬಳಿಕ ಅವಳ ಮನಸ್ಸು ಡಬಡಬನೆ ಹೊಡೆದುಕೊಳ್ಳುತ್ತಲಿದ್ದಿತು. ಅರ್ಧ ರೂಪಾಯಿಗೆ ಮೋಸವೇನೂ ಇಲ್ಲ'' ಎಂದು ಅವಳು ನಿಶ್ಚಯವಾಗಿಯೂ ನಂಬಿದ್ದಳು. ತನ್ನ ಮಗು ಆ ಗೊಂಬೆಯನ್ನು ಮುದುಕನೋರ್ವನಿಗೆ ಮಾರುವ ಹಾಗೂ, ಅವರು ಒಂದು ರೂಪಾಯಿಯನ್ನು ಕೊಡುವ ಹಾಗೂ, ನಾಳೆಯ ದಿನ ತುಂಬ ತೆಗೆದುಕೊಂಡು ಬಾ ಎಂದು ಅವರು ಹೇಳುವ ಹಾಗೂ ಅವಳು ಕನಸು ಕಂಡಳು. ತನ್ನ ಕಂದನು ಮಾರಿಕೊಂಡು ಬರುವವರೆಗೂ ಅವಳಿಗೆ ಕಾದಿರಲು ಸಾಧ್ಯವಾಗಲಿಲ್ಲ. ಆ ದೃಶ್ಯವನ್ನು ಕಣ್ಣಾರೆ ಕಾಣಬೇಕೆಂದು ಆತುರಗೊಂಡಳು. ಅವಳೂ ಅಂಗಡಿಯ ಬೀದಿಗೆ ಹೋದಳು. ತನ್ನ ಪುತ್ರನಿಗೆ ತಿಳಿಯದ ಹಾಗೆ ಒಂದು ಮರೆಯಾದ ಸ್ಥಳದಲ್ಲಿ ನಿಂತು ಅವನನ್ನು ಗಮನಿಸುತ್ತಿದ್ದಳು.

ಸಿದ್ದನ ಗೊಂಬೆಯನ್ನು ಅದೆಷ್ಟೋ ಮಂದಿ ಜನರು ನೋಡಿದರು; ಕೆಲವರು ಕೇಳಿಯೂ ಕೇಳಿದರು. ಆ ಮುದುಕನನ್ನೇ ಇದಿರು ನೋಡುತ್ತಲಿದ್ದನು.

ಆದುದರಿಂದ ಇತರರಾರಿಗೂ ಅವನು ಅದನ್ನು ಕೊಡಲಿಲ್ಲ. ಅಂದು ಮುದುಕರು ಸಾವಕಾಶವಾಗಿಯೇ ಬಂದರು. ಸಿದ್ದನ ಕೈಯಲ್ಲಿ ಅಂದ ವಾದೊಂದು ರಾಣಿಯ ಗೊಂಬೆಯಿರುವುದನ್ನು ನೋಡಿದರು.

"ತಾತಾ, ಈ ಗೊಂಬೆಯನ್ನು ಕೊಂಡುಕೊಳ್ಳಿ" ಎಂದನು ಸಿದ್ದ.

ಅವರು ಅದನ್ನು ಚೆನ್ನಾಗಿ ಪರಿಶೀಲಿಸಿ ನೋಡಿದರು.

"ಮಗೂ, ಇದನ್ನು ನೀನು ಮಾಡಿದಂತೆ ತೋರಲಿಲ್ಲವಲ್ಲಾ ; ಇದನ್ನು ಮಾಡಿದವರಾರು ?"

"ನಮ್ಮಮ್ಮನು ಮಾಡಿದಳು."

"ಇದನ್ನು ನೀನೇಕೆ ತಂದೆ ?"

"ನಮ್ಮಮ್ಮನು ತೆಗೆದುಕೊಂಡು ಹೋಗ ಹೇಳಿದಳು."

"ಹಾಗೆಯೇ ! ಇದು ನಿನ್ನ ಗೊಂಬೆಯಷ್ಟು ಚೆನ್ನಾಗಿಲ್ಲ. ನನಗಿದು ಬೇಡ. ನಿಮ್ಮಮ್ಮನಿಗೆ ಕೊಟ್ಟುಬಿಡು." ಎಂದು ಹೇಳಿ ಮುದುಕರು ಮುಂದೆ ಹೊರಟುಹೋದರು.

ಹುಡುಗನಿಗೆ ಸ್ವಲ್ಪವೂ ವ್ಯಸನ ಉಂಟಾಗಲಿಲ್ಲ. ಒಂದೇ ಸಮನೆ ಓಡಿ ಬಂದನು. ಅವನ ಮಾತೆಯು ಮುಂಚಿತವಾಗಿಯೇ ಬಂದುಬಿಟ್ಟಿದ್ದಳು. ಅವಳ ಮುಖ ಕಂದಿ ಹೋಗಿದ್ದಿತು.

"ಅಮ್ಮಾ, ನಿನ್ನ ಗೊಂಬೆ ಚೆನ್ನಾಗಿಲ್ಲವಂತೆ. ನನ್ನ ಗೊಂಬೆ ಮಾತ್ರವೇ ಚೆನ್ನಾಗಿದೆಯಂತೆ. ಇದು ಬೇಡವಂತೆ. ತಾತನು ಹೇಳಿದರು." ಎಂದು ಹೇಳುತ್ತಾ ಗೊಂಬೆಯನ್ನು ಕೆಳಗಿಟ್ಟನು. ಅವನ ಮುಖದಲ್ಲಿ ಗರ್ವದ ಚಿಹ್ನೆ ಮೂಡಿತು.

"ಚೆನ್ನಾಗಿಲ್ಲವೇ ?" ಎಂದು ಅವಳು ಕೇಳಿದಳು. ಆ ಅಜ್ಜನು ಅದೇಕೆ ಹಾಗೆ ಅಂದರೆಂದು ಅವಳಿಗೆ ಗೋಚರವಾಗಲಿಲ್ಲ; ಎಂದಿಗೂ ಅವ ಳಿಗೆ ತಿಳಿಯಲಾರದು.

---

# ಅವಳು

ಕೈಯಲ್ಲೊಂದು ತವರದ ಡಬ್ಬವನ್ನು ನೀಡುತ್ತಾ ಆ ಭಿಕ್ಷುಕನು ಕರ್ಕಶ ಧ್ವನಿಯಲ್ಲಿ, "ಕಾಲಾಣೆ ಹಾಕಿ, ಸ್ವಾಮೀ" ಎಂದು ಬೇಡಿದನು. ಬಸ್ಸಿನಿಂದ ಇಳಿದ ಅವಸರದಲ್ಲಿ ಅವನನ್ನು ಗಮನಿಸುವುದಕ್ಕಾಗಲಿ, ಅವನ ಡಬ್ಬದಲ್ಲಿ ಕಾಲಾಣೆ ಹಾಕಿ ಪುಣ್ಯವನ್ನು ಹೊಂದುವುದಕ್ಕಾಗಲಿ ನನಗೆ ಅವ ಕಾಶವಿರಲಿಲ್ಲ. ಅವನಿಗೆ ಕಣ್ಣಿಲ್ಲ. ಆಕಾಶವನ್ನು ತಲೆಯೆತ್ತಿ ನೋಡುತ್ತಾ ಭಿಕ್ಷೆ ಬೇಡಿದನು. ನನಗೆ ಕಣ್ಣಿದ್ದೂ ಅವನನ್ನು ಗಮನಿಸಲು ಹೊತ್ತಿರಲಿಲ್ಲ.

ಆದರೆ ಅವಳ ಮೇಲೆ ನನ್ನ ದೃಷ್ಟಿ ಬಿದ್ದಕೂಡಲೇ ಅವಸರವನ್ನು ಮರೆ ತೆನು. ಆ ಕುರುಡ ಭಿಕ್ಷುಕನ ಹತ್ತಿರದಲ್ಲಿ ಯಾವಾಗಲೂ ಎಡಬಿಡದೆ ಅವನನ್ನು ಹಿಡಿದು ದಾರಿ ತೋರಿಸಲು ಅವಳು ನಿಂತಿದ್ದಳು; ಅವನು ನಿಂತು ಭಿಕ್ಷೆ ಬೇಡಿದಾಗ ಅವನನ್ನು ಮುಟ್ಟದೆ ಕಾಪಾಡುವುದಕ್ಕಾಗಿ ಮಾತ್ರವೇ ನಿಂತಿದ್ದಳು. ನಾನು ಅವಳನ್ನು ಗಮನಿಸಿದೆನು; ಬಳಿಕ ಅವನನ್ನೂ ಗಮನಿಸುವಂತೆ ನನ್ನ ಮನಸ್ಸು ಪ್ರೇರೇಪಿಸಿತು.

ಭಗವಂತನು ಅದೆಷ್ಟೊಂದು ಬಗೆಯ ಜೊತೆಗಳನ್ನು ಕೂಡಿಸುತ್ತಾನೆ! ಕಣ್ಣುಹೋದ ಕುರುಡನಾದ ಇವನೆಲ್ಲಿ! ನಾಚಿಕೆಯೆಂಬ ಆಭರಣದಿಂದ ಕೂಡಿ ಬಳುಕುತ್ತಾ ಬಳುಕುತ್ತಾ ಬಡತನದಿಂದ ಹೊದ್ದಿಸಲ್ಪಟ್ಟು ಮರೆಯಾಗಿ ರುವ ಮೃದು ಮಧುರವಾದ ಈಕೆಯಲ್ಲಿ! ಪಾಪ!

ಅವಳೊಂದು ಮಾತನ್ನೂ ಆಡಲಿಲ್ಲ. ತಲೆಯೆತ್ತಿ ಸಹ ನೋಡ ಲಿಲ್ಲ. ಅವನನ್ನೇ, ಅವನು ಹೆಜ್ಜೆಯಿಡುವುದನ್ನೇ, ಅವಳ ಕಣ್ಣುಗಳು ಗಮನಿಸುತ್ತಿದ್ದವು.

ನಾನು ಇಳಿದು ಕಾಲಾಣೆಯ ಬಿಲ್ಲೆಯೊಂದನ್ನು ತೆಗೆದು ಆ ಡಬ್ಬದಲ್ಲಿ 'ಡೊಕ್' ಎಂದು ಹಾಕಿದೆನು. ಕುರುಡನು ಆ ಶಬ್ದವನ್ನು ಕೇಳಿ ತೃಪ್ತಿಗೊಂಡು ಕೈಮುಗಿದು ಜರುಗಿದನು. ಸಮೀಪದಲ್ಲೊಂದು ಕಲ್ಲು ಇದ್ದಿತು. ಅವಳು ಆವನ ಕೈಯನ್ನು ನಿಧಾನವಾಗಿ ಹಿಡಿದು, ಕಲ್ಲು ತಗಲದಂತೆ ಒಂದು ಪಾರ್ಶ್ವಕ್ಕೆ ಸರಿದು ಕರೆದುಕೊಂಡು ಹೋದಳು. ಮತ್ತೊಂದು ಬಸ್ಸಿನ ಸಮೀಪವಾಗಿ ಅವನು ಹೋಗಿ ನಿಂತನು. ಹೋಟೇಲ್ ಬೊಸೊಟ್ಟಾ ಹತ್ತಿರ ಎಗ್ಮೋರಿಗೆ ಹೋಗುವ ಬಸ್‌ಸ್ಟಾಂಡಿನ ಬಳಿ ಪ್ರತಿನಿತ್ಯವೂ ಈ ಜೊತೆಯನ್ನು ನೋಡಬಹುದು. ತಲೆಕಾಲು ತಿಳಿಯದಹಾಗೆ ಬಸ್ಸೊಂದು ಓಡಿಬಂದು 'ಡಕ್' ಎಂದು ನಿಲ್ಲುತ್ತದೆ. ಮತ್ತೊಂದು ಹೊರಡುತ್ತದೆ. ಜನರು ಇಳಿಯುತ್ತಾರೆ, ಹತ್ತುತ್ತಾರೆ. ಅಲ್ಲಿ ಜೀವನಯಾತ್ರೆಯು ಬಹು ವೇಗವಾಗಿ ಜರುಗುತ್ತದೆ. ಆ ವೇಗದ ನಡುವೆ ನಿಂತು ಕಣ್ಣುಕಾಣದ ಆ ಕುರುಡನು ಭಿಕ್ಷೆಬೇಡಿ ಜೀವನ ನಡೆಯಿಸುತ್ತಿದ್ದನು. ಅವನಿಗೆ ಊರುಗೋಲಿನಂತೆಯೂ ಜೊತೆಯಾಗಿಯೂ ಅವಳಿದ್ದಳು. ಅಲ್ಲಿ ತೋರುವ ಪ್ರಚಂಡ ವೇಗದ ನಡುವೆ ಮಾನುಷ ಹೃದಯವು ಕ್ಷಣಮಾತ್ರ ಭ್ರಮೆಗೊಳ್ಳುವಂತೆ ನಿಲ್ಲಿಸಿದಳು ಆ ಭಿಕ್ಷುಕಿ.

ಒಂದು ದಿನ ಅವಳ ಮುಖವನ್ನು ನೋಡಿದೆನು; ನೋಡಬೇಕೆಂದು ಪ್ರಯತ್ನಿಸಿ, ಕಾದಿದ್ದು ನೋಡಿದುದರಿಂದಲೇ ಆ ಮುಖವನ್ನು ಗಮನಿಸಲು ಸಾಧ್ಯವಾಯಿತು. ಅವಳ ನಯನಗಳಲ್ಲಿ ಆಳವೆಷ್ಟೆಂದರಿಯಲಾಗದ ಶೋಕ ಪಸರಿಸಿತ್ತು. ಮುಖದಲ್ಲಿ ವೇದನೆಯೂ ಕಷ್ಟವೂ ಅಪಮಾನವೂ ಕೂಡಿ ಹೋರಾಡಲು, ಅವುಗಳ ಮಧ್ಯೆ ಪ್ರತ್ಯೇಕವಾಗೊಂದು ಮಾಧುರ್ಯವೂ ನಾಚಿಕೆಯೂ ಚೆನ್ನಾಗಿ ಗಮನಿಸುವವರಿಗೆ ತೋರಿದುವು. 'ಪ್ರಪಂಚದಲ್ಲಿ ಶ್ರೀಮಂತ ಮನೆತನಗಳಲ್ಲಿ ಗಂಡಹೆಂಡರಿರುವರಷ್ಟೆ. ಅದೆಷ್ಟೊಂದು ಜಗಳ! ಎಷ್ಟೊಂದು ಗಲಭೆ! ಇವರು ಭಿಕ್ಷಾಟನ ಮಾಡಿದರೂ ಎಷ್ಟೊಂದು ಒಗ್ಗಟ್ಟಾಗಿರುವರು! ಇವಳಲ್ಲಿ ತೋರುವ ಸತೀತ್ವವು, ಸಾವಿರದಲ್ಲೊಬ್ಬರಲ್ಲಲ್ಲವೇ ಕಾಣಲಾಗುತ್ತದೆ?'—ನನ್ನ ಚಿಂತೆ ಅರಳಿ ಕಾವ್ಯಲೋಕವನ್ನೂ ಆದರ್ಶ ಪ್ರಪಂಚವನ್ನೂ ಎಟುಕಿ ಹಿಡಿಯಿತು.

'ಸತೀತ್ವದಲ್ಲಿ ದೈವಿಕವು ಹೊಂದಿಕೊಂಡಿದೆ. ತಳಮಳಿಸುತ್ತಿರುವ ಬದುಕಿನ ಬಿರುಗಾಳಿಯ ನಡುವೆ ಮನಶ್ಶಾಂತಿಯನ್ನು ಕಲ್ಪಿಸಲು ಆವಶ್ಯಕ

ವಾದ ಸಂಜೀವನವು ಸ್ತ್ರೀತ್ವದಲ್ಲಿದೆ. ಸ್ತ್ರೀತ್ವವಿಲ್ಲದೆ ಹೋಗಿದ್ದಲ್ಲಿ ಲೋಕದಲ್ಲಿರುವ ವೇಗಕ್ಕೆ ನೆಲೆಯಿಲ್ಲ; ಗಲಭೆಗಳಿಗೆ ಸಮಾಧಾನವಿಲ್ಲ; ವೀರತ್ವಕ್ಕೆ ವಿಜಯಸಂತುಷ್ಟಿ ಇಲ್ಲ; ಅಲೆದಾಟಕ್ಕೆ ವಿರಾಮವಿಲ್ಲ.''

''ಏನು ಹೀಗೆ ನಿಂತಿರುವಿರಲ್ಲಾ; ಬರುತ್ತೀರಾ? ಹತ್ತಿ, ಬೇಗ ಹತ್ತಿ'' ಎಂಬ ಕಂಡಕ್ಟರಿನ ಧ್ವನಿಯನ್ನು ಕೇಳಿದಾಗಲೇ ನಾನು ಈ ಲೋಕಕ್ಕೆ ಇಳಿದು ಬಂದೆನು.

೨

ಸುತ್ತಮುತ್ತಲೂ ನೋಡಿದೆನು. ನಾನು ಹುಡುಕಿದ ವಸ್ತು ಕಣ್ಣಿಗೆ ಗೋಚರವಾಗಲಿಲ್ಲ. ''ಅವರೆಲ್ಲಿ?'' ಎಂದು ಬಾಯಿ ತೆರೆದು ಕೇಳಿಬಿಟ್ಟೆನು. ಮನಸ್ಸು ಮಾತ್ರ, ''ಅವಳೆಲ್ಲಿ?'' ಎಂದೇ ಕೇಳಿತು. ಅಂದು ಕುರುಡನನ್ನಾಗಲಿ ಅವನ ಹೆಂಡತಿಯನ್ನಾಗಲಿ ನಾನು ನೋಡಲಿಲ್ಲ. ಬೆಚ್ಚಿಬಿದ್ದೆನು. ಅದಾರೋ ಬೇರೊಬ್ಬ ಭಿಕ್ಷುಕನು ಬಂದನು. ಅವನನ್ನು ಕೇಳಿ ನನ್ನ ಸಂಶಯವನ್ನು ತೀರಿಸಿಕೊಳ್ಳೋಣವೆಂದು ಯೋಚಿಸಿದೆನು. ಅವನೇನನ್ನಾದರೂ ತಿಳಿದುಕೊಂಡರೆ—? ನನ್ನ ಮನಸ್ಸಿನಲ್ಲಿ ಉದ್ಭವಿಸಿದ ಪ್ರಶ್ನೆಗೆ ಉತ್ತರ ಸಿಗದಿದ್ದಲ್ಲಿ ನನ್ನ ಕೆಲಸವೊಂದೂ ಮುಂದಕ್ಕೆ ಸಾಗದೆಂದು ತೋರಿತು. ''ಇಕೋ, ಇಲ್ಲಿ ಬಾ" ಎಂದು ಅವನನ್ನು ಕೂಗಿದೆ. ಅವನು ಬಂದನು. ನನ್ನ 'ಪರ್ಸ'ನ್ನು ತೆಗೆದು ಅವನಿಗೆ ಆಶೆ ತೋರಿಸುತ್ತಾ ಮೆಲ್ಲಗೆ ಕೇಳಿದೆ.

''ಏನಯ್ಯಾ, ಇಲ್ಲಿ ಕುರುಡನೊಬ್ಬನೂ ಅವನ ಹೆಂಡತಿಯೂ ಭಿಕ್ಷಾಟನ ಮಾಡುತ್ತಿದ್ದರಲ್ಲಾ; ಅವರುಗಳೆಲ್ಲಿ, ಕಾಣಲಿಲ್ಲವಲ್ಲಾ?"

''ಅಯ್ಯೋ ಬುದ್ಧಿ, ಆ ಕುರುಡನು ಒಂದು ವಾರದ ಕೆಳಗೆ ಸತ್ತು ಹೋದನು.''

ನನ್ನ ಪ್ರಶ್ನೆಗೆ ಉತ್ತರ ಹೇಳಿಬಿಟ್ಟೆನೆಂದು ಅವನು ತಿಳಿದನು; ಆದರೆ ನಿಜವಾಗಿಯೂ ನನಗೆ ಉತ್ತರ ದೊರಕಲೇ ಇಲ್ಲ. ಅವನು ಹೇಳಿದುದನ್ನು ಕೇಳಿದೊಡನೆಯೇ ನನ್ನ ಮೈ 'ಜುಂ' ಎಂದಿತು. ''ಹಾಗಾದರೆ ಅವಳು?'' ಎಂಬ ಪ್ರಶ್ನೆಯು ನನ್ನರಿವಿಲ್ಲದೆ ನನ್ನ ಬಾಯಿಂದ ಹೊರಬಿದ್ದಿತು.

"ಅದೆಲ್ಲಿಗೋ ಹೋಗಿಬಿಟ್ಟಳು, ಬುದ್ಧಿ" ಎಂದು ಹೇಳಿ ನಾನು ಕೊಟ್ಟ ಬಿಡಿಗಾಸನ್ನು ತೆಗೆದುಕೊಂಡು ತನ್ನ ಕಾರ್ಯವನ್ನು ಗಮನಿಸಲು ಮುಂದಕ್ಕೆ ನಡೆದನು.

ನನ್ನ ಹೃದಯದಲ್ಲಿ ಒಂದು ರೀತಿಯಾದ ವೇದನೆಯುಂಟಾಯಿತು. ವೇಗವೂ ಗಡಿಬಿಡಿಯೂ ಆವರಿಸಿದ್ದ ಆ ಸ್ಥಳವು ಬರಿಯ ಬಯಲಂತೆ ಕಂಡಿತು. ಅವಳನ್ನು ಪುನಃ ಎಲ್ಲಿಯಾದರೂ ನೋಡಿದರೇನೇ ನನಗೆ ಸಮಾಧಾನ ಉಂಟಾಗುವುದೆಂದು ತೋರಿತು.

೩

ಸರಿಯಾಗಿ ಮೂರು ತಿಂಗಳು ಉರುಳಿದವು. ಯಾವುದೋ ಒಂದು ಕೆಲಸದ ನಿಮಿತ್ತವಾಗಿ ನಾನು ಮೈಲಾಪುರಕ್ಕೆ ಹೋಗಬೇಕಾಗಿ ಬಂತು. ಬಸ್ಸಿನಲ್ಲಿ ಹತ್ತಿ 'ಲಜ್' (Luz) ಮೂಲೆಯಲ್ಲಿ ಬಂದಿಳಿದೆನು. ನನ್ನ ಕಣ್ಣುಗಳನ್ನು ನಂಬಲೇ ಆಗಲಿಲ್ಲ. ಅವಳನ್ನು ಕಂಡೆನು. ಅದರಲ್ಲಿ ಒಂದು ತೆರನಾದ ಆಶ್ಚರ್ಯವುಂಟಾಯಿತೆಂಬುದರಲ್ಲಿ ಸಂಶಯವೇನೂ ಇಲ್ಲ ಆದರೆ ಅದಕ್ಕೂ ಅಧಿಕವಾಗಿ ಮತ್ತೊಂದು ದೃಶ್ಯವನ್ನು ನೋಡಿದಾಗಲೇ ನಾನು ಬೆಚ್ಚಿಬಿದ್ದೆನು. ಬಡತನದಲ್ಲಿಯೂ ಭಿಕ್ಷಾಟನದ ಬದುಕಿನಲ್ಲಿಯೂ ಸ್ತ್ರೀತ್ವವು ಪಕ್ವಹೊಂದಿ ನಿಂತಂತೆ ನಾನು ಅಂದುಕೊಂಡ ಆ ಹೆಂಗಸು ಕಾಲಿಲ್ಲದ ಒಬ್ಬ ಕುಂಟನು ಕುಳಿತಿದ್ದ ಸಣ್ಣಗಾಡಿಯೊಂದನ್ನು ತಳ್ಳುತ್ತಿದ್ದಳು.

ಮೊದಲು ಕಂಡಿದ್ದ ಕುರುಡನ ಸ್ಥಾನದಲ್ಲಿ ಮತ್ತೊಬ್ಬನನ್ನು ಹಿಡಿದುಕೊಂಡಳೋ ಎಂಬಂತೆ! ನನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದ ಅವಳ ಸುಗುಣ ಚಿತ್ರವು ಚೂರುಚೂರಾಗಿ ಹರಿದುಹೋಯಿತು. ನನಗೆ ಆವಳ ಮೇಲೆ ಬಹಳ ಕ್ರೋಧವುಂಟಾಯಿತು. ಅವಳನ್ನು ಬಾಯಿ ತುಂಬ ದೂಷಿಸಬೇಕೆಂಬ ಆವೇಗವುಂಟಾಯಿತು.

ಮೆಲ್ಲಗೆ ಅವರಿದ್ದ ಸ್ಥಳವನ್ನು ಸಮೀಪಿಸಿದೆನು. ಧೈರ್ಯವಾಗಿ ಕಾಲುಗಳನ್ನು ತೆಗೆದಿಡಲಾಗಲಿಲ್ಲ. ಆ ಹೊಸ ಭಿಕ್ಷುಕನನ್ನು ನೋಡಿದೆನು. ಮುಂಚೆ ನೋಡಿದ ಕುರುಡನಿಗಿಂತಲೂ ಅವನು ವಯಸ್ಸಿನಲ್ಲಿ ಚಿಕ್ಕವನಾಗಿದ್ದನು.

ಕಾಲು ಮುದುರಿಕೊಂಡಿದ್ದವು. ಆದುದರಿಂದ ತನಗೆ ಪೀಠವಾಗಿಯೂ ವಾಹನವಾಗಿಯೂ ಉಪಯೋಗಿಸಲು ಗಾಡಿಯೊಂದನ್ನು ಸಂಪಾದಿಸಿಕೊಂಡು ಭಿಕ್ಷಾಟನದ ವ್ಯಾಪಾರವನ್ನು ನಡೆಯಿಸುತ್ತಿದ್ದನು. ಗಾಡಿಯನ್ನು ಅವಳು ತಳ್ಳುತ್ತಿದ್ದಳು. ಅವನ ವ್ಯಾಪಾರವನ್ನು ಅವಳು ಹಿಂದಿದ್ದು ಓಡಿಸಿಕೊಂಡು ಬಂದಳೆಂದೇ ಹೇಳಬೇಕು.

ಇಂದು ಅವಳ ಮುಖದಲ್ಲಿ ನೂತನವಾದೊಂದು ಶೋಭೆ ಮೂಡಿರುವಂತೆ ತೋರಿತು. ಆದರೂ ಹಳೆಯ ವೇದನೆಯೂ ಇಲ್ಲದೇ ಇಲ್ಲ. ಅವಳನ್ನು ಕುರಿತು ಒಂದು ಪ್ರಶ್ನೆಯನ್ನಾದರೂ ಕೇಳದಿದ್ದಲ್ಲಿ ಮನಸ್ಸು ಸಮಾಧಾನ ಹೊಂದಲಾರದೆಂದು ತೋರಿತು.

"ಅವನು ಯಾರು?" ಎಂದು ಅವಳನ್ನು ಕೇಳಿದೆ. ಆ ಪ್ರಶ್ನೆಯು ಹುಟ್ಟಲು ಆವಶ್ಯಕವೇನೆಂಬುದಾಗಿ ಅವಳು ಯೋಚಿಸಿದಳೋ ಏನೋ? ಅವಳು ಉತ್ತರ ಕೊಡಲಿಲ್ಲ. ಪುನಃ, "ನಿನ್ನನ್ನೇ ಕೇಳಿದೆ. ಈ ಆಳು ನಿನಗೇನಾಗಬೇಕು?" ಎಂದು ಮುಂಚಿನ ಪ್ರಶ್ನೆಗೆ ವ್ಯಾಖ್ಯಾನ ಮಾಡುವವನಂತೆ ಮತ್ತೊಂದು ಪ್ರಶ್ನೆಯನ್ನು ಹಾಕಿದೆನು. ಅದಕ್ಕೆ ಆ ಭಿಕ್ಷುಕನೇ ಉತ್ತರವಿತ್ತನು; "ನನ್ನ ಹೆಂಡತಿ, ಬುದ್ಧಿ" ಎಂದನು. ಆಗ ಅವಳನ್ನು ಗಮನಿಸಿದೆ. ಅವಳು ಜೀವ ಕಳೆಯಿಲ್ಲದ ಮರದಂತೆ ಅದನ್ನು ಕಿವಿಗೊಂಡು ಸುಮ್ಮನೆ ನಿಂತಿದ್ದಳು.

"ಹಾಗಾದರೆ ಆ ಕುರುಡನು—?" ಎಂದು ಕೇಳಲು ಹೊರಟೆ. ಆದರೆ ಆ ಪ್ರಶ್ನೆ ನನ್ನ ಹೃದಯದೊಳಗೆಯೇ ಅಡಗಿಹೋಯಿತು. ಕೇವಲ ಈ ಭಿಕ್ಷುಕ ಹೆಂಗಸಿನ ಬಾಳನ್ನು ಕುರಿತು ಇಷ್ಟೊಂದು ಪರಿಶೀಲನೆ ಏಕೆಂದು ಸುಮ್ಮನೆ ಹೋರಟು ಹೋದೆ. ನನ್ನ ಮನಸ್ಸು ಮಾತ್ರ ದೊಡ್ಡದಾಗಿ ಮೋಸ ಹೋದಂತೆ ಚಿಂತಿಸುತ್ತಿತ್ತು.

"ಛೀ, ಲೋಕವು ಮಹಾ ಕೇವಲವಾದದ್ದು!" ಎಂದು ಹೇಳಿಕೊಂಡೆ. ಲೋಕವೆಲ್ಲವೂ ಸಂಪೂರ್ಣವಾಗಿ ಆ ಭಿಕ್ಷುಕಳ ಹತ್ತಿರವೇ ಅಡಗಿರುವುದೇನು? ಏನೋ ಅದೊಂದು ಹುಚ್ಚು ಯೊಚನೆ!

೪

ಮೈಲಾಪುರಕ್ಕೆ ನಾನು ಹೋದ ಕೆಲ ಸಮಯಗಳಲ್ಲಿ ಲಜ್ ಮೂಲೆಯಲ್ಲಿ ಅವರನ್ನು ನೋಡಬೇಕೆಂದು ಯೋಚಿಸುವೆನು. ಆದರೆ ಅವರನ್ನು ಪ್ರತಿಯೊಂದು ಸಲವೂ ನೋಡಲಾಗುತ್ತಿರಲಿಲ್ಲ. ಏನೋ ಒಂದೆರಡು ಸಲ ಮಾತ್ರ ಅವರು ನನ್ನ ಕಣ್ಣಿಗೆ ಬಿದ್ದರು. ಅವರಿಗೆ ನಾನು ಒಂದು ಬಿಡಿ ಕಾಸನ್ನೂ ಹಾಕಲಿಲ್ಲ.

ಈ ರೀತಿಯಾಗಿ ಕೆಲ ದಿವಸಗಳು ಕಳೆದವು. ಅನಂತರ ಒಂದು ತಿಂಗಳ ಕಾಲ ಅವರುಗಳನ್ನು ಕಾಣಲಾಗಲಿಲ್ಲ, "ಸರಿ, ಮೂರನೆಯ ಬೇಟೆ ದೊರೆತಿರಬಹುದು." ಎಂದು ತೀರ್ಮಾನಿಸಿಕೊಂಡೆನು. ಅವಳನ್ನು ಮರೆತು ಬಿಡಬೇಕೆಂದು ಪ್ರಯತ್ನಿಸಿದೆ; ಮರೆತೇ ಹೋದೆನೆಂದುಹೇಳಬೇಕು.

* * * *

"ಇದೆಂತಹ ತಮಾಷೆ! ಈ ಶನಿ ಇಲ್ಲಿಗೇಕೆ ಬಂದಿತು?"

ಬಾಡಿ ಬತ್ತಿ ಹೋದವಳಾಗಿ, 'ಕಸ್‌ಟಮ್ ಹೌಸ್' ಹತ್ತಿರದಲ್ಲಿ ಜನರು ಓಡಾಡುವ ಪಕ್ಕದ ಸಣ್ಣ ರಸ್ತೆಯಲ್ಲಿ ನಿಂತು, ಜಹಜಿನಿಂದ ಇಳಿದು ಬರುವ ಜನರ ಗುಂಪನ್ನು ನೋಡುತ್ತಾ ಅವಳು ನಿಂತಿದ್ದಳು. ಅವಳ ಹತ್ತಿರ ಜೊತೆಗಾರನಾರೂ ಕಾಣಲಿಲ್ಲ. ಆ ದಾರಿಯಲ್ಲಿ ನಡೆದು ಬರುತ್ತಿದ್ದ ನಾನು ಅವಳನ್ನು ನೋಡಿ ನಿಂತೆನು. ಅವಳು ಅಷ್ಟು ದೊಡ್ಡ ಗುಂಪಿನೊಳಗೆ ಅದಾರನ್ನೋ ಇದಿರು ನೋಡುತ್ತಾ ಕಾತುರದೊಡನೆ ನಿಂತಿದ್ದಳು. ಆ ಕಾತುರತೆಯನ್ನು ಅವಳ ಆಳವಾದ ನೇತ್ರಗಳಲ್ಲಿ ನೋಡಿಬಿಟ್ಟೆನು.

"ನಿನ್ನ ಗಂಡನೆಲ್ಲಿ?" ಎಂದು ಪರಿಹಾಸ್ಯವಾಗಿ ಅವಳನ್ನು ಕೇಳಿದೆ.

"ಅವನೇ ಕಾಣಲಿಲ್ಲವಲ್ಲಾ" ಎಂದು ಅವಳು ಥಟ್ಟನೆ ಉತ್ತರ ಕೊಟ್ಟಳು. ಮರುಕ್ಷಣ ಎಚ್ಚರಗೊಂಡಳು. "ನಿಮಗೆ ಹೇಗೆ ಗೊತ್ತು ಬುದ್ಧೀ?" ಎಂದು ನನ್ನನ್ನು ಕೇಳಿ ಉತ್ತರವನ್ನು ನಿರೀಕ್ಷಿಸದೆ, "ಪಿನಾಂಗಿನ ಜಹಜು ಇಂದಲ್ಲವೇ ಬರುತ್ತದೆ ಬುದ್ಧೀ?" ಎಂದು ಮತ್ತೊಂದು ಪ್ರಶ್ನೆಯನ್ನೂ ಹಾಕಿದಳು.

ಅವಳು ಕೇಳಿದ ಪ್ರಶ್ನೆಗಳ ಹೊಂದಿಕೆ ನನ್ನ ಮನಸ್ಸಿಗೆ ಸರಿಯಾಗಿ ಹೊಳೆಯಲಿಲ್ಲ. "ನೀನು ನನಗೆ ಬಹಳ ದಿನಗಳಿಂದ ಗೊತ್ತುಂಟಲ್ಲಾ! ಆ ಕುರುಡನನ್ನು ಬಿಟ್ಟನಂತರ ಕುಂಟನನ್ನು ಹಿಡಿದುಕೊಂಡು ಅಲೆಯುತ್ತಿದ್ದೆ ಯಲ್ಲಾ, ಅವಳಲ್ಲವೇ ನೀನು?" ಎಂದೆ.

ನಾನೆಂಥ ಕಠೋರವಾದ ಕಾರ್ಯವನ್ನು ಮಾಡಿಬಿಟ್ಟೆ! ನನ್ನ ಪ್ರಶ್ನೆ ಯನ್ನು ಕೇಳಿದ ತಕ್ಷಣವೇ ಅವಳ ದೇಹ ಗಡಗಡನೆ ನಡುಗಿತು. ಕಣ್ಣು ಗಳಲ್ಲಿ ಧಾರೆಯಾಗಿ ಕಣ್ಣೀರು ಹೊಮ್ಮಿ ಸುರಿಯಿತು; ರೋದನವು ಅವಳ ಕಂಠವನ್ನು ಬಿಗಿಯಿತು.

ನಾನು ಅವಳ ಹೃದಯವನ್ನು ಚುಚ್ಚಿಬಿಟ್ಟೆನೆಂಬುದಾಗಿ ಅರಿತು ಕೊಂಡೆನು. ಅವಳ ಸ್ತ್ರೀತ್ವದ ಕುರುಹು ಮುಂಚೆಗಿಂತಲೂ ಸಾವಿರ ಪಾಲು ಹೆಚ್ಚಾಗಿ ಉಕ್ಕಿ ಶೋಭಿಸಿತು. ನನಗೂ ಅಳು ಬಂದಿತು. ಅವಳ ಕಣ್ಣು ಗಳಲ್ಲಿ ಕಣ್ಣೀರು ಸುರಿಯಿತೇ ಹೊರತು ಅವಳು ಬಾಯಿತೆರೆದು ಅಳಲಿಲ್ಲ.

"ಯಾಕಮ್ಮಾ ಅಳುತ್ತೀ?"

ಆ ಮಾತುಗಳನ್ನು ನಾನು ಕೇಳಿದಾಗ ಅವಳಿಗೆ ಬೇಸಿಗೆಯ ಬಿಸಿಲಿನಲ್ಲಿ ಅಲೆದಲೆದು ಬಂದವನ ಮೇಲೆ ಮಂದಮಾರತವು ಬೀಸಿದ ಹಾಗೆ ಆಗಿರ ಬೇಕು. ಅವಳು ಅಷ್ಟರವರೆಗೂ ಅಡಗಿಸಿಕೊಂಡಿದ್ದ ದುಃಖವನ್ನು ನನ್ನಲ್ಲಿ ನಂಬಿಕೆಯುಂಟಾದುದಕ್ಕೆ ಗುರುತಾಗಿ ಹೊರಗೆಡವಿದಳು; ಬಿಕ್ಕಿಬಿಕ್ಕಿ ಅಳಲು ಪ್ರಾರಂಭಿಸಿದನು.

"ಯಾರನ್ನು ನೋಡುತ್ತಿರುವೆ? ಏಕೆ. ಅಳುತ್ತೀ?" ಎಂದು ನಾನು ಮೃದುವಾಗಿ ಕೇಳಿದೆ.

ಅವಳು ಒಂದು ರೀತಿಯಾಗಿ ಸಮಾಧಾನ ತಂದುಕೊಂಡಳು. ಅವಳು ತನ್ನ ಮನೋವೇದನೆಯನ್ನು ಬಹಳ ದಿವಸಗಳಿಂದಲೂ ಅಡಗಿಸಟ್ಟಿದ್ದಳು. ಇಂದು ಅದು ಕೋಡಿಯೊಡೆದು ಹೊರಬಿದ್ದಿತು. ಅವಳು ತನ್ನ ಕತೆಯನ್ನು ಹೇಳತೊಡಗಿದಳು. ಅವಳು ಹೇಳಿದ ಭಾಷೆಯೋ ಬೇರೆ. ನಿಮಗೆ ನನ್ನ ಭಾಷೆಯಲ್ಲಿ ಅನುವಾದಿಸಿ ಹೇಳುತ್ತೇನೆ.

೫

"ನಾನು ಮಹಾ ಪಾಪಿಷ್ಟೆ! ನೀವು ನನ್ನನ್ನು ಬಹಳ ದಿನಗಳಿಂದ ಗಮನಿಸುತ್ತಿರುವಿರೆಂದು ತೋರುತ್ತದೆ. ನಾನು ಹುಟ್ಟಿ ಬೆಳೆದ ವರ್ತಮಾನವು ಒಂದು ದೊಡ್ಡ ಕತೆ. ಯಾವುದೋ ಒಂದು ಬಡ ಕುಟುಂಬದಲ್ಲಿ ಹುಟ್ಟಿದೆ. ಬಡ ಕುಟುಂಬದಲ್ಲಿ ಹುಟ್ಟಿದವರೊಬ್ಬರನ್ನು ಮದುವೆಯಾದೆ. ಅವರು ಕೂಲಿ ಮಾಡಿ ಬದುಕುತ್ತಿದ್ದರು. ನನಗೆ ಕಠಿಣವಾದ ಕಾರ್ಯವನ್ನು ಮಾಡಲು ಬರಲಿಲ್ಲ. ನನ್ನ ದುರದೃಷ್ಟ! ಅವರಬಳಿ ಕೆಲವು ಸ್ನೇಹಿತರು ಸೇರಿದರು. ಸಮುದ್ರದಾಚೆಯ ಸೀಮೆಗೆ ಹೋದರೆ ಕೂಲಿಮಾಡಿ ದುಡ್ಡು ಶೇಖರಿಸಬಹುದೆಂದು ಆಶೆ ತೋರಿಸಿ ಕರೆದುಕೊಂಡು ಹೋಗಿಬಿಟ್ಟರು. ನಾನಿದ್ದಲ್ಲಿ ಅವರಿಗೆ ತೊಂದರೆ ಜಾಸ್ತಿಯೆಂದು ನನಗೆ ಹೇಳದೆಯೇ ಅವರು ಹೋಗಿಬಿಟ್ಟರು. ಆ ಬಳಿಕ ನಾನೇನು ಮಾಡುವುದು, ಹೇಗೆ ಬದುಕುವುದು ಎಂದು ಒಂದೂ ಬಗೆಹರಿಯಲಿಲ್ಲ. ಕೆಲಸಮಾಡುವುದೆಂತೆಂದು ಅರಿಯದ ನನಗೆ ಕೆಲಸ ಕೊಡುವವರೂ ಇಲ್ಲ. ಸ್ವಂತ ಊರಿನಲ್ಲಿರುವುದಕ್ಕಿಂತ ನಗರಕ್ಕೆ ಹೋದರೆ ಒಂದೆರಡು ಮನೆಗಳಲ್ಲಿ ಕಸಮುಸುರೆ ಮಾಡಿಯಾದರೂ ಬದುಕಬಹುದೆಂದು ಬಂದೆನು.

"ಇಲ್ಲಿರುವ ಜನರನ್ನು ನೋಡಿದೆ. ಎಲ್ಲರೂ ದೊರೆತನದವರಂತೆ ಇದ್ದಾರೆ. ಯಾರ ಹತ್ತಿರದಲ್ಲಿ ಹೋಗಿ ಹೇಗೆ ಕೆಲಸ ಕೇಳಲಿ? ನನಗೆ ಧೈರ್ಯ ಹುಟ್ಟಲಿಲ್ಲ. ನನ್ನ ಹಣೆಯ ಬರಹವು ನನ್ನನ್ನು ಭಿಕ್ಷುಕರ ಗುಂಪಿನಲ್ಲಿ ಸೇರಿಸಿತು. ನನ್ನ ಪತಿಯೇ ನನಗೆ ದೈವ, ಬುದ್ಧೀ. ಅವರನ್ನು ನೆನೆಸಿಕೊಂಡು ಜೀವಿಸುತ್ತಲಿದ್ದರೆ ಯಾವುದೋ ಒಂದು ದಿವಸ ಪುನಃ ಅವರನ್ನು ನೋಡಬಹುದೆಂಬ ಆಶೆಯಿದೆ.

"ಭಿಕ್ಷುಕರ ಗುಂಪಿನಲ್ಲಿ ಅಧಿಕ ಶ್ರಮವಿಲ್ಲದೆ ಅನ್ನ ದೊರಕಿತು. ನನ್ನ ಪ್ರಾಣವನ್ನು ಕಾಪಾಡಲು ದಾರಿಯುಂಟಾಯಿತು. ಆದರೆ ಮಾನವನ್ನು ಕಾಪಾಡುವುದು ಬಲು ಕಷ್ಟ, ಬುದ್ಧೀ. ಅಯ್ಯಯ್ಯೋ! ಆ ಗುಂಪಿನವರ ನಡವಳಿಯ ಮೇಲೆ ದೂರು ಹೇಳಬಾರದು. ನಾನು ಅವರ ಹತ್ತಿರದಲ್ಲಿ ಸಿಕ್ಕಿಬಿದ್ದೆ. ನಾನು ಯಾವುದನ್ನು ತೊರೆದರೂ ನನ್ನ ಮಾನವನ್ನು ಮಾತ್ರ ತೊರೆ

ಯಲು ಸಮ್ಮತಿಸೆನು. ಪ್ರಾಣವನ್ನಾದರೂ ಕಳೆದುಕೊಳ್ಳಬಲ್ಲೆನು. ಒಬ್ಬನು ಮುಟ್ಟಿ ಮಾಂಗಲ್ಯ ಕಟ್ಟಿದ ಈ ದೇಹವನ್ನು ಮತ್ತೊಬ್ಬನಿಗೆ ಒಪ್ಪಿಸಲಾರೆನು.'' ಈ ಸಮಯದಲ್ಲಿ ಅವಳು ವೀರಾವೇಶದೊಡನೆ ಮಾತನಾಡಿದಳು.

''ನನ್ನ ಮಾನವನ್ನು ಕಳೆದುಕೊಳ್ಳದೆ ಬದುಕಲು ನನಗೊಂದುಪಾಯವೂ ತೋರದಾಯಿತು. ಆ ಭಿಕ್ಷುಕರ ಗುಂಪಿನಲ್ಲಿ ಒಬ್ಬ ಕುರುಡನಿದ್ದನು. ಅವನು ಸ್ವಲ್ಪ ಒಳ್ಳೆಯವನಾಗಿ ಕಂಡನು. ಅವನೂ ನಾನೂ ಸೇರಿ ಒಂದು ಒಪ್ಪಂದ ವನ್ನು ಮಾಡಿಕೊಂಡೆವು. 'ಬೇರೊಂದು ಸ್ಥಳಕ್ಕೆ ಹೋಗಿಬಿಡಬೇಕು. ನಾನು ಅವನಿಗೆ ಸಹಾಯಕಳಾಗಿರಬೇಕು. ಹೊರವೇಷಕ್ಕೆ ಮಾತ್ರ ಇಬ್ಬರೂ ಗಂಡ ಹೆಂಡಿರಂತೆ ಇರೋಣ. ಆದರೆ ಅವನು ನನ್ನನ್ನು ತನ್ನ ಮಗಳ ಹಾಗೆಯೇ ಭಾವಿಸಬೇಕು.' ಈ ರೀತಿಯಲ್ಲಿ ನಾಟಕ ನಟಿಸುತ್ತಿದ್ದೆವು. ನಾನೊಬ್ಬನ ಹೆಂಡತಿಯೆಂಬ ಭಾವನೆಯಿಂದ ನನ್ನನ್ನು ಯಾವ ಭಿಕ್ಷುಕನೂ ಸಮೀಪಿಸಲಿಲ್ಲ. ನಾನು ಆ ಕುರುಡನಿಗೆ ಹೆಂಡತಿಯಂತೆ ನಟಿಸುತ್ತಾ ನನ್ನನ್ನು ಕಾಪಾಡಿಕೊಳ್ಳು ತ್ತಿದ್ದೆ. ಹಾಳು ದೈವವು ಆ ಕುರುಡನನ್ನು ಕೊಂಡೊಯ್ದುಬಿಟ್ಟಿತು.'' ಇಲ್ಲಿ ಅವಳ ನೇತ್ರಗಳು ಸಜಲವಾದುವು.

''ಬಳಿಕ ಮತ್ತೊಬ್ಬ ಪುರುಷನನ್ನು ಹುಡುಕಿದೆನು. ಆ ಕುಂಟನು ದೊರಕಿದನು. ಅವನು ಕುರುಡನಷ್ಟು ಒಳ್ಳೆಯವನಾಗಿರದಿದ್ದರೂ ಮಿಕ್ಕವ ರೆಲ್ಲರಿಗಿಂತ ಅವನಲ್ಲಿ ನನಗೆ ನಂಬಿಕೆ ಹುಟ್ಟಿತು ಅವನೊಡನೆ ಮೈಲಾಪುರ ದಲ್ಲಿದ್ದೆನು. ಅವನು ಕೆಟ್ಟನಡತೆಯುಳ್ಳವನೆಂದು ಬಳಿಕ ತಿಳಿಯಬಂದಿತು. ಅವನನ್ನು ಬಿಟ್ಟು ಬಂದುಬಿಟ್ಟೆನು.

''ಪ್ರತಿಯೊಂದು ವಾರವೂ ಪಿನಾಂಗಿನಿಂದ ಹಡಗು ಬರುತ್ತದೆಯೆಂದೂ ಅಲ್ಲಿ ದುಡ್ಡು ಗಳಿಸಿದವರು ಇಲ್ಲಿಗೆ ಬಂದು ಇಳಿಯುತ್ತಾರೆಂದೂ ನನಗೆ ತಿಳಿಯ ಬಂದಿತು. ಆದುದರಿಂದ ಪಿನಾಂಗ್‌ನ ಜಹಜು ಬರುವಾಗಲೆಲ್ಲಾ ಇಲ್ಲಿಗೆ ಬಂದು ನೋಡುತ್ತೇನೆ. ಅವರು ಬರುವರೇ? ಬುದ್ಧೀ, ಹೇಳಿ.''

* * * *

ಕಣ್ಣೀರಿಡುತ್ತಾ ನಾನು ಕೇಳುತ್ತಿದ್ದೆನು. ''ಅವರು ಬರುವರೇ?''

ಎಂದು ಅವಳು ಕೇಳಿದುದೇ ಅವಳ ಚರಿತೆಯ ಕೊನೆಯ ಮಾತು. ಆದರೂ ನಾನು ಅವಳ ಕತೆಯಲ್ಲಿಯೇ ಮುಳುಗಿಹೋಗಿದ್ದೆ.

"ನಿನ್ನ ಹೆಸರೇನಮ್ಮಾ?" ಎಂದು ಕೇಳಲು ಬಾಯಿ ತೆರೆದೆ.

ಯಾರನ್ನೋ ನೋಡಿ ಅವಳು ಮಿಂಚಿನಂತೆ ಗುಂಪಿನೊಳಗೆ ಓಡಿದಳು.

ಅವಳನ್ನು ಹಿಂಬಾಲಿಸಿ ಓಡಬೇಕೆಂದು ಒಂದು ಹುಚ್ಚು ಯೋಚನೆಯು ತಲೆದೋರಿತು. ಆದರೆ ಕಾಲು ಕೆಲಸಮಾಡಲಿಲ್ಲ. "ನಿನ್ನ ಹೆಸರೇನಮ್ಮಾ?" ಎಂಬ ಪ್ರಶ್ನೆಯನ್ನು ಮಾತ್ರ ನನ್ನ ತುಟಿಗಳು ಮಂತ್ರದಂತೆ ಜಪಿಸುತ್ತಿದ್ದುವು.

---

# ತೋಟದವನು

ರಾಮಸ್ವಾಮಿ ಮೊದಲಿಯಾರ್ರು ತಮ್ಮ ಉದ್ಯೋಗದ ಕಾಲದಲ್ಲಿ ಸಂಪಾದಿಸಿದ ಹಣವೆಲ್ಲವೂ ಗುರುತಿಲ್ಲದೆ ಮಾಯವಾಗಿ ಹೋಯಿತು. ಅವರು ತಮ್ಮ ಜೀವಮಾನದಲ್ಲಿ ಪ್ರಾಣಪದಕದಂತೆ ಪರಿಗಣಿಸಿ ಬಂದ ಬಂಗಲೆಯನ್ನು ಸಹ ಅವರ ಪುತ್ರರು ಮಾರಲು ನಿಶ್ಚಯಿಸಿಬಿಟ್ಟರು. ತಮ್ಮ ಗ್ರಾಮವಾದ 'ಶೆಂದಾರಪಟ್ಟಿ' ಗೇನೇ ಹೋಗಿ ಅಲ್ಲಿರುವ ಭೂಮಿಯನ್ನು ನೋಡಿಕೊಂಡು ಕಾಲ ಕಳೆಯೋಣವೆಂದು ಯೋಚಿಸಿ ಕಣ್ಣಪ್ಪ ಮೊದಲಿಯಾರ್ರವರು ತಮ್ಮ ತಂದೆ ಬಹು ಶ್ರಮಪಟ್ಟು ಅಂದವಾಗಿ ಕಟ್ಟಿದ ಬಂಗಲೆಯನ್ನು ಮಾರಲು ಏರ್ಪಾಟು ಮಾಡಿದರು.

ಬಂಗಲೆಯೆಂದ ಮಾತ್ರಕ್ಕೇ ಅದೊಂದು ಸಾಮಾನ್ಯವಾದ ಬಂಗಲೆ ಯೇನು? ರಾಮಸ್ವಾಮಿ ಮೊದಲಿಯಾರರೊಬ್ಬ ಚತುರರಾದ ಗಣ್ಯಪುರು ಷರು. ಸುಖವಾಗಿರಬೇಕೆಂಬುದು ಅವರ ಧ್ಯೇಯ. ಸಾಲ ತೆಗೆದಾದರೂ ತಮ್ಮ ಗೌರವವನ್ನು ಕಾಪಾಡಿಕೊಳ್ಳುವುದೇ ಪುರುಷಾರ್ಥವೆಂಬುದು ಅವರ ಭಾವನೆ. ಮೊಹಿಯುದ್ದೀನ್ ಮರಕ್ಕಾಯರ್ ಕಂಪೆನಿಯಲ್ಲಿ ಅವರು ಮ್ಯಾನೇ ಜರ್ ಕೆಲಸ ನೋಡುತ್ತಿದ್ದರು. ಕಟ್ಟಡಗಳ ಕೆಲಸಗಾರರನ್ನೂ ಎಂಜನೀ ಯರುಗಳನ್ನೂ, ಕಂಟ್ರಾಕ್ಟರುಗಳನ್ನೂ ಅವರು ಚೆನ್ನಾಗಿ ಬಲ್ಲರು. ಆರಿಸಿ ತೆಗೆದ, ಬಾಳಿಕೆ ಬರುವ ಸಾಮಾನುಗಳಿಂದ ಅವರು ತಮ್ಮ ಬಂಗಲೆಯನ್ನು ಕಟ್ಟಿಸಿದರು. ಅದರ ನಿರ್ಮಾಣವು ಬಹಳ ಶ್ಲಾಘನೀಯವಾದದ್ದು. ಸುಮಾರು ಒಂದು ಮೈಲಿ ವಿಸ್ತಾರವುಳ್ಳ ಸ್ಥಳ ದೊರಕಿರುವಾಗ ಅವರ ಮನೋಭಾವನೆಗೆ ತಕ್ಕಂತಹ ಭವನವನ್ನು ನಿರ್ಮಿಸಲು ಕ್ಷಾಮವೇನೂ ಇಲ್ಲವಲ್ಲ. ಹಣವನ್ನೂ ಧಾರಾಳವಾಗಿ ಖರ್ಚುಮಾಡಿದರು. ಬಂಗಲೆಯ ಕಟ್ಟಡಕ್ಕಿಂತ ಅದರ ಸುತ್ತಲೂ ನಿರ್ಮಿಸಲ್ಪಟ್ಟ ಉದ್ಯಾನದ ಸೌಂದರ್ಯವೇ ಉತ್ತಮವಾಗಿದ್ದಿತು.

ವಿವಿಧ ಹೂಗಿಡಗಳೂ, ವಿಲಾಯತಿಯ 'ಕ್ರೋಟನ್' ಗಳೂ, ಕಣ್ಣುಗಳಿಗೆ ಇಂಪನ್ನು ಉಂಟುಮಾಡುವ ಲತಾವರ್ಗಗಳೂ, ನೀರಿನ ಕಾರಂಜಿಗಳೂ ಆ ಉದ್ಯಾನಕ್ಕೆ ಸೌಂದರ್ಯವನ್ನು ಕಲ್ಪಿಸಿದವು. ಬಂಗಲೆಯ ಹಿಂಭಾಗ ದಲ್ಲಿ ದಾಳಿಂಬೆ, ಸೀಬೆ, ಸೇಬು, ಕಸಿ ಮಾವಿನ ಮರವೇ ಮೊದಲಾದ ಹಣ್ಣಿನ ಗಿಡಗಳನ್ನು ನೆಡಿಸಿ ಬೆಳೆಸಿದರು.

ಅವರಿಗೆ ತಕ್ಕಂತಹ ತೋಟದವನು ದೊರಕಿದನು. ಕುಪ್ಪುಸ್ವಾಮಿಗೆ ಬಹಳ ದಿವಸಗಳಿಂದ ತೋಟದ ಕೆಲಸದ ಅನುಭವವಿದ್ದಿತು. ಮೊದಲಿ ಯಾರರ ತೋಟದಲ್ಲಿ ಇಂತಹ ಸ್ಥಳದಲ್ಲಿ ಇಂತಹ ಗಿಡವೇ ಇದೆಯೆಂಬುದು ಅವನಿಗೆ ಬಾಯಿಪಾಠವಾಗಿದ್ದಿತು. ಅವನ ಮನಸ್ಸಿನಲ್ಲಿ ಆ ಶೃಂಗಾರವನದ ಚಿತ್ರವು ಪ್ರಕಾಶಮಯವಾಗಿ ಶೋಭಿಸುತ್ತಿದ್ದಿತು. ಅವನು ಕೂಲಿಗೆ ಮಾತ್ರವೇ ಕೆಲಸ ಮಾಡುತ್ತಿರಲಿಲ್ಲ. ಆ ಗಿಡಗಳನ್ನೂ ಮರಗಳನ್ನೂ ಬಳ್ಳಿ ಗಳನ್ನೂ ನೋಡುವುದರಲ್ಲಿ ಅವನಿಗೊಂದು ಪ್ರತ್ಯೇಕವಾದ ಆನಂದೋತ್ಸಾಹ ವುಂಟಾಗುತ್ತಿದ್ದಿತು. "ಕುಪ್ಪುಸ್ವಾಮಿಯು ಇಲ್ಲದಿದ್ದಲ್ಲಿ ಈ ಸ್ಥಳವು ಈ ರೀತಿ ನಿರ್ಮಾಣವಾಗುತ್ತಿದ್ದಿತೆ?" ಎಂದು ಮೊದಲಿಯಾರರು ಕೆಲವು ಸಮಯ ಗಳಲ್ಲಿ ಅವನನ್ನು ಹೊಗಳುವರು.

ಮೊದಲಿಯಾರರ ಹತ್ತಿರ ಕುಪ್ಪುಸ್ವಾಮಿ ಹೇಳುವ ಆಲೋಚನೆ ಯಾವುದೂ ನಡೆಯದೆ ಇರುತ್ತಿರಲಿಲ್ಲ. ಅವನಿಗೆ ಆ ತೋಟವನ್ನು ಅಭಿ ವೃದ್ಧಿಗೊಳಿಸುವುದರಲ್ಲಿ ಅದೆಷ್ಟೋ ಆಸಕ್ತಿ! ಊರಿನಲ್ಲಿರುವ ತೋಟದವರೆಲ್ಲ ರನ್ನೂ ಸ್ನೇಹಮಾಡಿಕೊಂಡು ಅಲ್ಲಲ್ಲಿ ಬಂಗಲೆಗಳಲ್ಲಿ ಹೊಸ ಹೊಸದಾಗಿ ಬರುವ ಗಿಡವನ್ನೂ ಬಳ್ಳಿಯನ್ನೂ ನೋಡಿ ಹೇಗಾದರೂ ಪ್ರಯತ್ನಪಟ್ಟು ಸಂಪಾದಿಸಿ ತಂದು ತನ್ನ ತೋಟದಲ್ಲಿ ನೆಟ್ಟು ಬೆಳೆಸುವನು. ತನ್ನ ತೋಟ ವೆಂದೇ ಅದನ್ನವನು ಭಾವಿಸುತ್ತಿದ್ದನು. ಅಲ್ಲಿರುವ ಗಿಡಗಳಲ್ಲಿ ಯಾವುದಾದ ರೊಂದನ್ನು ಯಾರಾದರೂ ಬಂದು ಮೊದಲಿಯಾರರ ಹತ್ತಿರದಲ್ಲಿ ಕೇಳಿದರೆ ಅವರು ದಾಕ್ಷಿಣ್ಯವಿಲ್ಲದೆ, "ನನಗೆ ಗೊತ್ತಿಲ್ಲ; ಕುಪ್ಪುಸ್ವಾಮಿ ಕೊಟ್ಟಲ್ಲಿ ತೆಗೆದುಕೊಳ್ಳಿ" ಎಂದು ಹೇಳಿಬಿಡುವರು.

ಆ ಗಿಡಗಳ ಮೇಲೆ ಅವನಿಗೆಷ್ಟೊಂದು ಪ್ರೀತಿ! ಅವನಿಗೆ ವಯಸ್ಸು ಅರುವತ್ತರ ಮೇಲಿರಬಹುದು. ಅಂದಚೆಂದವನ್ನೂ ಸುವಾಸನೆಯನ್ನೂ

ಅನುಭವಿಸತಕ್ಕ ಯೌವನವನ್ನು ಅವನು ದಾಟಿ ಹಲವು ವರ್ಷಗಳು ಕಳೆದು ಹೋದುವು. ಆದರೂ ಆ ಪುಷ್ಪಗಳ ಮೇಲಿನ ಪ್ರೇಮಬಂಧನವು ದಿನೇ ದಿನೇ ಅಧಿಕವಾಗುತ್ತಿದ್ದಿತು. ಎರಡು ದಿವಸಗಳಿಗೆ ಮುಂಚಿತವಾಗಿ ನೆಟ್ಟ ಪುಷ್ಪ ಲತೆಯಲ್ಲಿ ಒಂದು ಚಿಗುರು ಉದ್ಭವವಾಗಿರುವುದನ್ನು ಕಂಡುಬಿಟ್ಟಲ್ಲಿ ಅವನಿಗೆ ಒದಗುವಷ್ಟು ಆನಂದವು ಒಂದು ಸವರನ್ ಕೊಟ್ಟರೂ ಆಗಲಾರದು. ಆ ಚಿಗುರನ್ನು ನಾಲ್ಕು ದಿಕ್ಕುಗಳಲ್ಲೂ ಸುತ್ತಿ ಸುತ್ತಿ ಪ್ರದಕ್ಷಿಣೆ ಬಂದು ನೋಡುವನು. ಬಂಜೆಗೆ ಮಗು ಹುಟ್ಟಿದರೆ, ಕುರುಡನಿಗೆ ಕಣ್ಣು ಬಂದರೆ—ಹೀಗೆಯೇ ಜೋಡಿಸಿಕೊಂಡು ಹೋಗಿ—ಎಷ್ಟೊಂದು ಆನಂದವೋ ಅಷ್ಟೊಂದು ಆನಂದವು ಆ ಪುಷ್ಪಲತೆಯಲ್ಲಿ ಪುಷ್ಪಿತವಾದ ಮೊಟ್ಟಮೊದಲನೆಯ ಹೂವನ್ನು ಅವನು ಕಂಡುಬಿಟ್ಟರೆ ಅವನಿಗುಂಟಾಗುವುದು. ಅದನ್ನು ತಕ್ಷಣವೇ ಮೊದಲಿಯಾರರಿಗೆ ತಿಳಿಸದ ಪಕ್ಷದಲ್ಲಿ ಅವನ ಮೆದುಳು ಸಿಡಿದು ಹೋಗುವುದು.

ಅವನು ಕುತೂಹಲದೊಡನೆ ಓಡಿಬರುವಾಗಲೇ ಮೊದಲಿಯಾರರು ಸತ್ಯಾಂಶವನ್ನು ಅರಿತುಕೊಳ್ಳುವರು. "ಏನೋ ಕುಪ್ಪುಸ್ವಾಮಿ, ಇಂದು ಯಾವುದೋ ಹೊಸ ಪುಷ್ಪವೊಂದು ಪುಷ್ಪಿತವಾಗಿದೆಯಲ್ಲವೇ ?" ಎಂದು ನಸುನಗುತ್ತಾ ಕೇಳುವರು.

"ಅಕೋ, ಆ ಮೂಲೆಯಲ್ಲಿಟ್ಟಿರುವ ಸಂಪಿಗೆ ಗಿಡವು ಹೂ ಬಿಟ್ಟಿದೆ, ಬುದ್ಧೀ", ಎಂದು ಸಂತೋಷ ಚಿತ್ತನಾಗಿ ಉತ್ತರ ಕೊಡುವನು.

ಕುಪ್ಪುಸ್ವಾಮಿಗೆ ಕೆಲಸದ ಹೊತ್ತು ಎಂಬುದೊಂದೂ ಇಲ್ಲ. ಅವನು ಯಾವಾಗ ನೋಡಿದರೂ ತೋಟದಲ್ಲೇ ಇರುವನು. ಅವನ ಮಗಳಾದ ಚೆನ್ನಿ ಗೂ ಸಹ ತನ್ನ ಕೈಯಾರೆ ಹೂವೊಂದನ್ನು ಕಿತ್ತುಕೊಂಡು ಹೋಗಿ ಕೊಡಲಾರನು. ಪುಷ್ಪಗಳನ್ನು ಅದರದರ ಗಿಡಗಳಲ್ಲಿಯೂ ಬಳ್ಳಿಗಳಲ್ಲಿಯೂ ಇರುವಾಗ ನೋಡುವುದರಲ್ಲಿ ಮಾತ್ರವೇ ಅವನಿಗೆ ಅಮಿತಾನಂದ.

"ಏನ್ರೀ ಬುದ್ಧೀ, ಹಕ್ಕಿಯ ರೆಕ್ಕೆಯನ್ನು ಕೀಳುವ ಹಾಗೆ ಹೂವನ್ನು ಗೊಂಚಲು ಗೊಂಚಲಾಗಿ ಮುರಿದು ಬಿಡುವುದರಲ್ಲೇನು ಲಾಭ? ಮಗುವಿನ ಕೈಯನ್ನು ಮುರಿದರೆ ಪಾತಕವೆಂದು ಹೇಳುತ್ತಾರೆ. ಗಿಡಮರ ಬಳ್ಳಿಗಳಿಗೆ

ಸಹ ಜೀವವಿದೆಯಂತಲ್ಲಾ. ಆ ಗಿಡಗಳಲ್ಲಿಯೂ ಮರಗಳಲ್ಲಿಯೂ ಬಿಡುವ ಹೂಗಳನ್ನು ಕೀಳುವುದು ಪಾಪವಲ್ಲವೇ?" ಎಂದು ಅವನು ಮೊದಲಿಯಾರರನ್ನು ಕೇಳುವನು. ಮೊದಲಿಯಾರರಿಗೆ ಅದೊಂದು ಬುದ್ಧಿಯಿಲ್ಲದ ದಡ್ಡನ ಪ್ರಶ್ನೆಯಂತೆ ತೋರುವುದು. ಅವನು ಮಗುವಿಗೂ ಗಿಡಕ್ಕೂ ತಾರತಮ್ಯವನ್ನು ಕಾಣಲಿಲ್ಲವೆಂಬುದನ್ನು ಅವರಿಂದ ಸಂಪೂರ್ಣವಾಗಿ ನಂಬಲಾಗಲಿಲ್ಲ. ಹೂವನ್ನು ಕೀಳುವುದು ದೋಷವೆಂದರೆ ಮತ್ತೆ ಯಾವುದಕ್ಕೋಸ್ಕರವಾಗಿ ಗಿಡಬಳ್ಳಿಗಳನ್ನು ಬೆಳೆಸುವುದು?" ಎಂದು ಇದಿರು ಪ್ರಶ್ನೆಯೊಂದನ್ನು ಹಾಕುವರು ಮೊದಲಿಯಾರರು.

"ಇಲ್ಲ, ಬುದ್ಧೀ. ಮಗುವಿನ ಮುಖ ಸುಂದರವಾಗಿದೆಯೆಂದರೆ ಅದರ ಕತ್ತನ್ನು ತಿರುವಿ ತೆಗೆದೇ ಅಂದ ನೋಡಕೇನು? ಆ ಕತ್ತಿನಲ್ಲಿ ಅಂಟಿಕೊಂಡಿರುವಾಗ ನೋಡುವುದಲ್ಲವೇ ಚೆಂದ? ಹೂವನ್ನೂ ಗಿಡದಲ್ಲಿಯೇ ನೋಡುವಾಗ ಎಷ್ಟೊಂದು ಆನಂದ ಉಂಟಾಗುತ್ತದೆ!"

ಪುನಃ ಮಗುವೂ ಗಿಡವೂ ಕುಪ್ಪುಸ್ವಾಮಿಗೆ ಒಂದೇ ಒಂದು ತೋರುವುದನ್ನು ಮೊದಲಿಯಾರರಿಗೆ ತಿಳಿಯಲಾಗಲಿಲ್ಲ. "ಹಾಗಾದರೆ ನಾವು ತರಕಾರಿಯನ್ನು ತಿನ್ನುವುದೂ ಪಾಪಕರ. ಗಿಡದಲ್ಲಿರುವಂತೆಯೇ ನೋಡುತ್ತಿದ್ದಲ್ಲಿ ನಮ್ಮ ಹೊಟ್ಟೆ ತುಂಬಿ ಬಿಡುವುದು!" ಎಂದು ಪರಿಹಾಸ್ಯ ಧ್ವನಿಯಲ್ಲಿ ಅವರು ಹೇಳುವರು. ಕುಪ್ಪುಸ್ವಾಮಿಗೆ ಅವರ ಮಾತು ಅರ್ಥವಾಗದು.

ಸೇಲಂನಿಂದ ತರಿಸಿ ಮಡಗಿದ ಕಸಿಮಾವಿನ ಗಿಡವನ್ನು ಕುಪ್ಪುಸ್ವಾಮಿಯು ತನ್ನ ಪ್ರಾಣಪದಕದಂತೆ ಕಾಪಾಡುತ್ತಿದ್ದನು. ಅದಕ್ಕೆಂತೆಂತಹ ಶುಶ್ರೂಷೆಗಳನ್ನೂ ಮಾಡಬೇಕೋ ಅದೆಲ್ಲವನ್ನೂ ಮಾಡಿದನು. "ಈ ಮರ ಹೂಬಿಟ್ಟು ಕಾಯಾಗಿ ಕಳಿತು ಹಣ್ಣಾಗಿ ಉದುರುವಾಗಲೇ ಆ ಹಣ್ಣನ್ನು ತೆಗೆದು ತಿನ್ನಬೇಕು, ಬುದ್ಧೀ." ಎಂದು ಮೊದಲಿಯಾರರ ಹತ್ತಿರದಲ್ಲಿ ಮುಂಚಿತವಾಗಿಯೇ ವಿಜ್ಞಾಪಿಸಿಕೊಂಡಿದ್ದನು. ಅವನಿಗೆ ಮಿಕ್ಕ ಗಿಡಮರಬಳ್ಳಿಗಳ ಮೇಲಿದ್ದ ಪ್ರೇಮಕ್ಕಿತಲೂ ಸಾವಿರಪಾಲು ಹೆಚ್ಚಾದ ಪ್ರೇಮವು ಆ ಕಸಿಮಾವಿನ ಮರದ ಮೇಲೆ ಉಂಟಾಯಿತು. ಅದರಿಂದ ಉದುರುವ ಎಲೆಯು ಯಾವ ಕೆಲಸಕ್ಕೆ ಉಪಯೋಗ? ಅದನ್ನು ತೆಗೆದು ಮೂಸಿ ನೋಡುವನು!

ಕಣ್ಣುಗಳಿಗೆ ಒತ್ತಿಕೊಳ್ಳುವನು! ಬಲಿತ ಎಲೆಯನ್ನು ಯಜಮಾನರಿಗೆ ಹಲ್ಲು ಉಜ್ಜಿಕೊಳ್ಳಲು ಆರಿಸಿಕೊಡುವನು. ಪ್ರೇಮ ಬಲಿತರೆ ಅದು ಹುಚ್ಚಾಗಿ ಪರಿಣಮಿಸುವುದಲ್ಲವೇ. ಕುಪ್ಪುಸ್ವಾಮಿಗೆ ಆ ಮಾವಿನ ಮರವನ್ನು ಕಂಡು ಹುಚ್ಚು ಹಿಡಿದು ಬಿಟ್ಟಿದ್ದಿತು.

ಕುಪ್ಪುಸ್ವಾಮಿಗೆ ವಿವಾಹವಾಗಿ ನಲವತ್ತು ವರ್ಷಗಳಿಗೂ ಅಧಿಕವಾಗಿರಬಹುದು. ಅವನಿಗೆ ಮದುವೆ ಜರುಗಿದ ದಿವಸ ಲೋಕಸ್ವಭಾವಕ್ಕನುಸಾರವಾಗಿ ಒಂದು ರೀತಿಯ ಆನಂದವುಂಟಾಗಿರಬೇಕಲ್ಲವೇ? ಅವನಿಗೂ ಆ ಆನಂದಕ್ಕೇನೂ ಕೊರತೆಯಿಲ್ಲ. ಆದರೆ ಇಂದು ಉಂಟಾದ ಆನಂದ ಎಂದೂ ಅವನಿಗೆ ಉಂಟಾಗಿರಲಿಲ್ಲ. ಚಿನ್ನಿ ಹುಟ್ಟಿದಾಗ ಒದಗಿದ ಸಂತೋಷವು ಈ ಆನಂದದಲ್ಲ ಲಕ್ಷದಲ್ಲೊಂದು ಪಾಲು ಮಾತ್ರವೇ ಎಂದು ಹೇಳಬಹುದು. ಅಷ್ಟೊಂದು ಉತ್ಸಾಹ, ಆನಂದ, ಕೋಲಾಹಲ! ಹೆಂಡವನ್ನೇನಾದರೂ ಕುಡಿದುಬಿಟ್ಟನೇನು? ಇಲ್ಲ, ಇಲ್ಲ. ಅದೆಷ್ಟೊಂದು ಕುಣಿದಾಟ! ಅವನ ಹೃದಯದಲ್ಲಿ ಹೊಮ್ಮುವ ಆನಂದ ಸಾಗರವು ವದನದಲ್ಲಿ ಉಕ್ಕಿ ಸುರಿಯುತ್ತಿದ್ದಿತು! ಅವನಿಗೆ ಹುಗಿದಿಟ್ಟ ಹಣವೇನಾದರು ಸಿಕ್ಕಿಬಿಟ್ಟಿತೇನು? ಒಂದೂ ಇಲ್ಲ. ಅವನು ಬೆಳೆಸಿದ ಕಸಿಮಾವಿನ ಮರವು ಅಂದು ಮೊಗ್ಗುಬಿಟ್ಟಿದ್ದಿತು. ಆಹಾ! ಅದೆಷ್ಟೊಂದು ಉಚ್ಚ ಸ್ಥಾಯಿಯಲ್ಲಿ ಅವನ ಕಂಠವು ಮಾತನಾಡುತ್ತಲಿದೆ! ಓಹೋ, ಅವನಿಗುಂಟಾಗಿರುವ ಆನಂದವು ಅವನ ಮಿದುಳನ್ನು ಕಲಕಿಬಿಟ್ಟರೇನು ಗತಿ?

"ಇನ್ನು ಮೇಲೆ ಕಾಯಿ ಬಿಡುತ್ತೆ; ಹಣ್ಣಾಗುತ್ತೆ. ಹಣ್ಣು ಕೊಳಿತು ಉದುರಿದ ನಂತರವೇ ಯಜಮಾನರಿಗೆ ಕೊಡುವೆನು. ಆಗಲೇ ಅದಕ್ಕೆ ರುಚಿ ಅಧಿಕವಾಗಿರುವುದು" ಎಂದು ಅವನು ಮನೋರಾಜ್ಯವನ್ನು ಕಟ್ಟಿದನು. ಆ ಮಾವಿನ ಹೂವಿನ ಸುಗಂಧವು ಮಂದಮಾರುತದಲ್ಲಿ ಕಲೆತು ಬೀಸುತ್ತಿರಲು ಆ ಗಿಡದ ನೆರಳಿನಲ್ಲಿ ತನ್ನ ಅಂಗವಸ್ತ್ರವನ್ನು ಹಾಸಿಕೊಂಡು ಅದರ ಮೇಲೆ ಮಲಗಿದನು. ಅವನಿಗೆ ಆಗ ಉಂಟಾದ ಮನಶ್ಶಾಂತಿಗೆ ಯಾವುದನ್ನು ಉಪಮಾನವಾಗಿ ಹೇಳಬಹುದು? ಪರಮ ಉಪಶಾಂತ ಸ್ಥಿತಿಯಲ್ಲಿ ಮಹದಾನಂದವನ್ನು ಅನುಭವಿಸುವುದಾಗಿ ವೇದಾಂತಪುರುಷರು ಗ್ರಂಥಗಳಲ್ಲಿ ಓದಿದುದನ್ನು ಒಪ್ಪಿಸುತ್ತಾರಲ್ಲಾ, ಅದನ್ನು ಹೇಳಬಹುದೆ? ಪ್ರೇಮಿಗಳ

ಅಂತರಂಗವು ಪ್ರೇಮವೆಂಬ ವಿದ್ಯುಚ್ಛಕ್ತಿಯ ದೆಸೆಯಿಂದ ಕೂಡಿದ ಕಾಲದಲ್ಲಿ ಏರ್ಪಡುವ ಆನಂದವನ್ನು ಹೇಳಬಹುದೇ? ಇದೆಲ್ಲವೂ ಒಂದೇ ಮಟ್ಟವೇ ಹೌದು.

ಅಯ್ಯೋ! ಮನುಷ್ಯನಿಗೆ ಎಷ್ಟೊಂದು ಆಶಾಭಂಗ! ಅವನ ಬದುಕಿನ ಪ್ರತಿಯೊಂದು ಕ್ಷಣದಲ್ಲಿಯೂ ಯಮಧರ್ಮರಾಜನು ಇಣಿಕಿ ನೋಡುವ ಅತಿಶಯವನ್ನು ಹೇಗೆ ಅರಿಯಲು ಸಾಧ್ಯ? ಮೊದಲಿಯಾರರ ಆನಂದಕರವಾದ ಜೀವನದಲ್ಲಿ ಮಲೇರಿಯಾ ಜ್ವರದ ದೂತನನ್ನು ಮೊಟ್ಟ ಮೊದಲು ಕಳುಹಿಸಿ ಅನಂತರ ಯಮಧರ್ಮರಾಜನು ಪ್ರವೇಶಿಸಿದನು. ಅವರು ಸ್ವರ್ಗಸ್ಥರಾದರು. ಅವರ ಪುತ್ರರಾದ ಕಣ್ಣಪ್ಪ ಮೊದಲಿಯಾರರು ಆಸ್ತಿಪಾಸ್ತಿಯ ಲೆಕ್ಕ ನೋಡಿದರು. "ಇಷ್ಟರ ಮೇಲೆ ಮದರಾಸಿನಲ್ಲಿರುವುದರಿಂದ ಪ್ರಯಜನವೇನೂ ಇಲ್ಲ"ವೆಂದು ಯೋಚಿಸಿದರು.

ಕುಪ್ಪುಸ್ವಾಮಿಗೆ ಅವನು ನಿರೀಕ್ಷಿಸುತ್ತಿದ್ದ ಆನಂದವು ಅರಳುವ ಸಂದರ್ಭದಲ್ಲಿ ಸಿಡಿಲು ಬಡಿದಂತೆ ಆಯಿತು. ಮೊದಲಿಯಾರರು ಹೋದದ್ದು ಸಹ ಅಷ್ಟೊಂದು ವ್ಯಸನವಾಗಲಿಲ್ಲ. ಅವರ ಪುತ್ರರು ಬಂಗಲೆಯನ್ನು ತೊರೆದು ತಾನು ತನ್ನ ಪ್ರಾಣಪದಕದಂತೆ ಬೆಳೆಸಿದ ತೋಟವನ್ನು ಬಿಟ್ಟು ಬಿಟ್ಟು ಹೋಗುವರೆಂಬ ವಾರ್ತೆಯು ತಿಳಿದಾಗ, ಅವನ ಹೃದಯದಲ್ಲೊಂದು ಸೂಜಿ ಚುಚ್ಚಿದಂತಾಯಿತು. "ಈ ಬಂಗಲೆಯನ್ನು ಇನ್ನು ಯಾರು ಕೊಂಡುಕೊಳ್ಳುವರೋ? ನಮ್ಮನ್ನು ಮಡಗಿಕೊಳ್ಳಲು ಅವರು ಸಮ್ಮತಿಸುತ್ತಾರೋ ಇಲ್ಲವೋ! ಅಥವಾ ಬೇರೆ ಯಾವ ಪಾತಕನು ಬರುತ್ತಾನೋ" ಎಂದು ಕೊರಗಿದನು. "ಈ ತೋಟವನ್ನು ಬಿಟ್ಟು ಹೋದರೆ ನನ್ನ ಪ್ರಾಣ ಉಳಿಯಲಾರದು. ಕೂಲಿಯಿಲ್ಲದೆ ಸಮ್ಮನೆಯಾದರೂ ಇಲ್ಲಿಯೇ ಕೆಲಸಮಾಡುವೆನೆಂದು ಕೇಳುವೆನು. ಇಲ್ಲದಿದ್ದಲ್ಲಿ ಈ ಪ್ರಪಂಚದಲ್ಲಿ ಬಾಳು ನನಗೇನು ಬೇಕಾಗಿದೆ?" ಎಂದು ಚಿಂತಿಸಿ ಹಲುಬಿದನು.

* * * *

ಪುಣ್ಯಕೋಟಿ ಶೆಟ್ಟರು ಆ ಬಂಗಲೆಯನ್ನು ಕೊಂಡರು. ತಮಗೆ ತಿಳಿದ ತೋಟದವನೊಬ್ಬನನ್ನು ನಿಯಮಿಸಿಕೊಂಡರು. ಕುಪ್ಪುಸ್ವಾಮಿ ತನ್ನ

ಪ್ರಾಣಾಧಿಕವಾದ ಆ ತೋಟವನ್ನು ಮತ್ತೊಬ್ಬನ ಕೈಯಲ್ಲಿ ಒಪ್ಪಿಸಿಬಿಟ್ಟು ಅಗಲಬೇಕಾದ ಪರಿಸ್ಥಿತಿ ಒದಗಿತು. "ತಮ್ಮಯ್ಯಾ, ನಾನು ಯಾವಾಗಲಾದರೂ ಇಲ್ಲಿಗೆ ಬರುವೆನು. ನನ್ನ ಕೈಯಿಂದ ಬೆಳೆಸಿದ ಈ ಮಕ್ಕಳನ್ನು ನೋಡಲು ನನಗೆ ಅವಕಾಶ ಕೊಡಬೇಕು.'' ಎಂದು ಅವನು ಅಂಗಲಾಚಿದನು. ಅವನ ಕಣ್ಣುಗಳಲ್ಲಿ ಕಣ್ಣೀರ ಧಾರೆಯು ಹೊರ ಹೊಮ್ಮಿತು; ಮೇಲೆ ಮಾತನಾಡಲಾಗಲಿಲ್ಲ ; ಗಂಟಲು ಬಿಗಿಯಿತು.

ಹೊಸ ತೋಟದವನು ಬಹು ಕಠಿಣ ಹೃದಯದವನು. ಅವನಿಗೆ ಹಣದ ಮೇಲೆ ಕಣ್ಣು. ಇವನಿಗೆ ಇಲ್ಲಿಗೆ ಬರಲು ಅವಕಾಶವಿತ್ತರೆ ಹಳೆಯ ಬಳಕೆಯಿಂದ ಏನನ್ನಾದರೂ ಮಾಡುವನು. ಯಜಮಾನರ ಹತ್ತಿರದಲ್ಲಿ ಹೇಳಿ ತಾನು ಬಂದು ಪುನಃ ಕೆಲಸದಲ್ಲಿ ನೆಲಸಿಬಿಡುವನು ; ನಮ್ಮನ್ನು ಅಟ್ಟಿಸಿಬಿಡುವನು'' ಎಂದು ಅವನು ಯೋಚಿಸಿದನು.

''ಅದೆಲ್ಲಾ ಆಗಲಾರದಪ್ಪಾ'' ಎಂದು ತೀರ್ಮಾನವಾಗಿ ಹೇಳಿಬಿಟ್ಟನು.

''ನಿನಗೆ ಸಹಾಯಕನಾಗಿ ನಾನೂ ಏನಾದರೂ ಕೆಸಸ ಮಾಡುತ್ತಿರುತ್ತೇನೆ. ನನಗೆ ಕೂಲಿಯೇನೂ ಬೇಡ. ಇಷ್ಟೊಂದು ದಿವಸವಿಲ್ಲಿ ಇದ್ದುಬಿಟ್ಟು ಇದನ್ನು ಬಿಟ್ಟು ಅಗಲಬೇಕೆಂದರೆ ಬಹಳ ಕಷ್ಟವಾಗಿದೆ. ನನ್ನ ಮಗುವನ್ನು ಬಿಟ್ಟು ಅಗಲಿದರೂ ಇಷ್ಟೊಂದು ವ್ಯಸನವಾಗಲಾರದು.'' ಎಂದನು ಕುಪ್ಪುಸ್ವಾಮಿ.

''ನೀನೊಬ್ಬ ಮುದಿಗೊಡ್ಡು ; ನೀನು ನನಗೆಂತಹ ಸಹಾಯವನ್ನು ಮಾಡಬಲ್ಲೆ? ಹೋಗು, ಹೋಗು ! ಜಾಸ್ತಿ ಮಾತನಾಡಿದರೆ ಧಣಿಗೆ ಹೋಗಿ ಹೇಳುವೆನು, ಜೋಕೆ !'' ಎಂದು ದಯೆದಾಕ್ಷಿಣ್ಯವಿಲ್ಲದೆ ಹೊಸ ತೋಟದವನು ಉತ್ತರವಿತ್ತನು.

''ಅಯ್ಯೋ, ಭಗವಂತಾ !'' ಎಂದು ಅಳುತ್ತಳುತ್ತಾ ಕುಪ್ಪನು ಮನೆಯನ್ನು ಹೋಗಿ ಸೇರಿದನು.

* * * *

ಪ್ರತಿನಿತ್ಯವೂ ಒಂದು ಸಲ ಆಬಂಗಲೆಯನ್ನು ಹಾದು ಕುಪ್ಪುಸ್ವಾಮಿ ಹೋಗುವನು. ಅದರ ಮುಂಭಾಗದಲ್ಲಿ ನಿಲ್ಲುವನು. ಗಾಳಿಯಲ್ಲಿ ಅಲ್ಲಾ

ಡುವ ಲತೆಗಳನ್ನು ಗಮನಿಸುವನು. ಒಂದೇ ಸಮನೆ ಒಳಗೆ ಓಡಬೇಕೆಂದು ಅವನ ಮನಸ್ಸು ಪ್ರೇರೇಪಿಸುವುದು. ಆದರೆ ಬಾಗಿಲನ್ನು ತೆರೆಯಲು ಆ ರಾಕ್ಷಸನು ಸಮ್ಮತಿಸನಲ್ಲಾ ! ಮುದುಕನು ನಿಂತಲ್ಲಿಯೇ ನಿಂತುಬಿಡುವನು. ಅಪರೂಪವಾಗಿ ಜನಿಸಿದ ಮಗುವನ್ನು ಹೂತುಬಿಟ್ಟು ಅದರ ಸಮೀಪದಲ್ಲಿ ನಿಂತು ಕಣ್ಣೀರಿಡುವ ಪ್ರೀತಿಯ ತಂದೆಯು ಅಳುವಂತೆ ಅವನು ಬಿಕ್ಕಿ ಬಿಕ್ಕಿ ಅಳುವನು.

ಅದೆಷ್ಟೋ ದಿನ ಆ ಮನುಷ್ಯನನ್ನು ಅಂಗಲಾಚಿ ಬೇಡಿ ನೋಡಿದನು. "ಒಂದು ದಿನವಾದರೂ ಆ ಕಸಿಮಾವಿನ ಮರವನ್ನು ಬಂದು ನೋಡ ಬೇಕು. ನಿನ್ನ ಮನಸ್ಸು ಕರಗಲಿಲ್ಲವೇ ? " ಎಂದು ಕೇಳಿದನು. ಬಂಗಲೆಯ ಹಿಂಭಾಗದಲ್ಲಿ ಇದ್ದ ಆ ಮರವು ಅವನ ಕಣ್ಣುಗಳಿಗೆ ಕಾಣಿಸಲಿಲ್ಲ. "ಗೊತ್ತುಂಟು, ಎಲ್ಲಾ ಗೊತ್ತುಂಟು ; ಈ ರೀತಿಯಾಗಿ ಹೊಂಚು ಹಾಕಿ ಬಂದು ಹಣ್ಣುಗಳನ್ನು ಕದ್ದುಕೊಂಡು ಹೋಗೋಣವೆಂಬ ಯೋಚನೆಯೋ?" ಎಂದು ಗದರಿಸಿವನು ಆ ಪಾಪಿಷ್ಠ. ಅವನ ಮಾತಿನಿಂದ ಅದು ಹಣ್ಣು ಬಿಟ್ಟಿದೆಯೆಂಬುದನ್ನು ಮುದುಕನು ಅರಿತನು. "ಯಾಕೆ ಇವನನ್ನು ಒಂದೇ ಗುದ್ದು ಗುದ್ದಿಬಿಟ್ಟು ಓಡಿ ಹೋಗಿ ಆ ಮರವನ್ನು ನೋಡಿಕೊಂಡು ಬರ ಬಾರದು ? " ಎಂದು ಕೂಡ ಅವನ ಮನಸ್ಸು ಯೋಚಿಸಿತು. ಮರುಕ್ಷಣವೇ "ನನ್ನ ಹಣೆಯಬರಹ ! ನಾನು ಮಾಡಿದ ಪಾಪ ! ನಾನು ಸಾಕಿದ ಮರವನ್ನು ಕಣ್ಣಾರೆ ಕಾಣಲು ಕೊಟ್ಟಿಡಲಿಲ್ಲ !" ಎಂದು ದುಃಖಿತನಾಗಿ ಹಿಂದಿರು ಗುವನು.

* * * *

ಅರುಣೋದಯವಾಗಿದೆ ; ಕತ್ತಲು ಸಂಪೂರ್ಣವಾಗಿ ಕಳೆಯಲಿಲ್ಲ. ಕೆಪ್ಪುಸ್ವಾಮಿ ಆ ರಾತ್ರಿಯೆಲ್ಲ ಮನಸ್ಸಿನೊಡನೆ ದೊಡ್ಡದೊಂದು ಹೋರಾಟ ವನ್ನು ನಡೆಯಿಸಿದನು. ಅವನ ಹೃದಯವು 'ಪಠಾರ್' ಎಂದು ಸಿಡಿದು ಬಿಡುವಂತಿತ್ತು. ಕೊನೆಯ ಪಕ್ಷ ಒಂದು ಸಲವಾದರೂ ಆ ಕಸಿಮಾವಿನ ಮರವನ್ನು ಕಾಣದಿದ್ದ ಪಕ್ಷದಲ್ಲಿ ಇನ್ನು ಮೇಲೆ ಅವನು ಬುದ್ಧಿ ಸ್ವಾಧೀನ ವುಳ್ಳವನಾಗಿರಲಾರನು. ಕೊನೆಗೆ ಹೇಗಾದರೂ ಮಾಡಿ ಕಳ್ಳತನದಿಂದ

ಲಾದರೂ ಬಂಗಲೆಯೊಳಗೆ ನುಗ್ಗಿ ಅದನ್ನು ನೋಡಿ ಬರುವುದೆಂದು ತೀರ್ಮಾನಿಸಿದನು.

ಹೇಗೋ ಕಾಂಪೌಂಡಿನ ಗೋಡೆಯನ್ನು ಹತ್ತಿ ದುಮುಕಿ ಒಬ್ಬರಿಗೂ ತಿಳಿಯದಂತೆ ಮರವನ್ನು ಸಮೀಪಿಸಿದನು. ಒಂದೇ ಓಟ! ಆ ಮರವನ್ನು ತಬ್ಬಿಕೊಂಡು "ಹೋ" ಎಂದು ಗೋಳಾಡಿಬಿಟ್ಟನು. ಆ ಶಬ್ದವು ಅಲ್ಲಿ ಮಲಗಿದ್ದ ತೋಟದವನ ಕಿವಿಗೆ ಎಟಕಿತು. ಬಂದು ನೋಡಿ ಕಸಿಮಾವಿನ ಮರದ ಪ್ರಾಣದಲ್ಲಿಯೇ ಕುಪ್ಪುಸ್ವಾಮಿಯ ಪ್ರಾಣವೂ ಲೀನವಾಗಿರುವುದು ಅವನಿಗೆ ತಿಳಿಯುವ ಬಗೆ ಹೇಗೆ? "ಲೋ ಪೋಲಿ ಮುದುಕಾ! ಕಂಡ ಹಾಗೆ ಕಳ್ಳತನ ಮಾಡುತ್ತಾ ಸಿಕ್ಕಿಬಿದ್ದೆಯಾ!" ಎಂದು ತಲೆಯ ಮೇಲೆ ಎರಡೇಟನ್ನು ಹಾಕಿ ಗರ್ಜಿಸಿದನು ಆ ತೋಟದವನು. ಕುಪ್ಪುಸ್ವಾಮಿಯಾದರೋ ಅಷ್ಟೊಂದು ಏಟುಗಳನ್ನೂ ಸಹಿಸಿಕೊಂಡು ತಬ್ಬಿದ್ದ ಕೈಯನ್ನು ಸಡಿಲಿಸಲೇ ಇಲ್ಲ. ಬಲವಾಗಿ ತಬ್ಬಿದ್ದ ಕೈಯ ಮೇಲೆ ಹೊಡೆದನು ಆ ಪಾತಕ. ಆಗ ಸಹ ಮುದುಕನು ಕೈ ತೆಗೆಯಲಿಲ್ಲ. ತನ್ನ ಕ್ರೋಧವೆಲ್ಲವನ್ನೂ ಒಟ್ಟುಗೂಡಿಸಿ ಬಲವಾದೊಂದು ಏಟನ್ನು ಬಿಟ್ಟಾಗ "ಅಯ್ಯೋ" ಎಂದು ಕಿರಿಚುತ್ತಾ ಕೆಳಗೆ ಬಿದ್ದನು. ಅವನಿಗೆ ಸ್ಮರಣೆ ತಪ್ಪಿಹೋಯಿತು. ಅಷ್ಟರೊಳಗೆ ಬಂಗಲೆಯಿಂದ "ಏನೋ ಅದು?" ಎಂದು ಕೇಳುತ್ತಾ ಬಂದರು ಪುಣ್ಯಕೋಟಿ ಶೆಟ್ಟರು.

"ಈ ಕಳ್ಳ ಬಡ್ಡೀಮಗ ಬಂಗಲೆಯೊಳಗೆ ನುಗ್ಗಿ ಹಣ್ಣುಗಳನ್ನು ಕದಿಯಲು ಬಂದಿರುವನು. ನಾನು ಕಂಡುಬಿಟ್ಟೆ; ಹೊಡೆದೆನು. ಕೆಳಗೆ ಬಿದ್ದು ಸ್ಮರಣೆ ತಪ್ಪಿದವನಂತೆ ನಟಿಸುತ್ತಾನೆ" ಎಂದನು. ಮಸಕುಮಸಕಾದ ಬೆಳಕಿನಲ್ಲಿ ಶೆಟ್ಟರು ಮುದುಕನನ್ನು ಬಗ್ಗಿ ನೋಡಿದರು. ಅವನು ನಿಜವಾಗಿಯೂ ಜ್ಞಾನತಪ್ಪಿ ಬಿದ್ದಿರುವುದನ್ನು ಕಂಡು ನೀರನ್ನು ತಂದು ಚಿಮುಕಿಸ ಹೇಳಿದರು

ಮುದುಕನು ಕಣ್ಣು ತೆರೆದನು. ಮಾವಿನ ಮರವನ್ನು ಕಂಡ ಮಿತಿ ಮೀರಿದ ಆನಂದದಿಂದಲೂ ತಲೆಗೆ ಬಿದ್ದ ಹೊಡೆತದಿಂದಲೂ ಅವನಿಗೆ ಸ್ವಲ್ಪ ಹೊತ್ತು ನೆನಪೇ ಬರಲಿಲ್ಲ. ಬಳಿಕ ನಿಧಾನವಾಗಿ ತಡವರಿಸಿಕೊಂಡು ಎದ್ದನು.

"ಯಾಕೆ ಇಲ್ಲಿಗೆ ಬಂದೆ?" ಎಂದರು ಶೆಟ್ಟರು.

ಮುದುಕನು ಸ್ವಲ್ಪ ನಿಧಾನಿಸಿದನು. ಎಲ್ಲವೂ ಜ್ಞಾಪಕಕ್ಕೆ ಬಂದಿತು. "ಬುದ್ಧೀ, ನನ್ನ ಮಗನನ್ನು ನೋಡಲು ಬಂದೆ. ಸತ್ಯವಾಗಿಯೂ ಹೇಳುತ್ತೇನೆ; ನಾನು ಕದಿಯಲು ಬರಲಿಲ್ಲ. ನನ್ನ ಕಂದನನ್ನು ನೋಡಿದುದಾಯಿತು. ಇಷ್ಟರ ಮೇಲೆ ನಾನು ಸಂತೋಷವಾಗಿ ಸಾಯಬಲ್ಲೆನು'' ಎಂದು ಅಳುತ್ತಳುತ್ತಾ ನುಡಿದನು. ಶೆಟ್ಟರಿಗೆ ಏನೊಂದೂ ಅರ್ಥವಾಗಲಿಲ್ಲ.

''ಇವನೊಬ್ಬ ಹುಚ್ಚನಾಗಿರಬಹುದು'' ಎಂದರು.

''ಬುದ್ಧೀ, ಈ ಮಾವಿನ ಮರದ ಹುಚ್ಚೇ ನನಗೆ ಹಿಡಿದಿತ್ತು. ಇದನ್ನು ನಾನು ನನ್ನ ಕೈಯಾರೆ ಬೆಳಸಿದೆನು. ಒಂದು ಸಲವಾದದರೂ ಇದನ್ನು ನೋಡಬೇಕೆಂದು ಅಂಗಲಾಚಿ ಬೇಡಿದೆನು. ಇವರ ಮನಸ್ಸು ಕರಗಲಿಲ್ಲ. ಇದನ್ನು ಕಾಣದೆ ನನಗೆ ನಿದ್ರೆಯೇ ಹತ್ತಲಿಲ್ಲ. ಆದುದರಿಂದ ಈ ರೀತಿಯಾಗಿ ಮಾಡಿದೆ. ನಾನು ಮಾಡಿದ್ದೇನೋ ತಪ್ಪಿತವೇ ಹೌದು. ಒಂದೇ ಒಂದು ವರವನ್ನು ಮಾತ್ರ ತಾವು ದಯಪಾಲಿಸಬೇಕು. ಪದೇ ಪದೇ ಈ ಮರವನ್ನು ನಾನು ಬಂದು ನೋಡಲು ಅವಕಾಶ ಕೊಡಬೇಕು. ನಾನು ಕದಿಯುವುದಿಲ್ಲ. ಹಣ್ಣು ನನಗೆ ಬೇಡ. ನಮ್ಮ ಯಜಮಾನರಿಗೂ ಕೂಡ ಮರದಿಂದ ಹಣ್ಣು ಕಳಿತು ತಾನಾಗಿ ಬೀಳುವಾಗ ಮಾತ್ರವೇ ಹಣ್ಣನ್ನು ತಿನ್ನಬಹುದೆಂದಲ್ಲವೇ ಹೇಳಿದ್ದೆ? ಅಂಥವನು, ನಾನು ಆ ಹಣ್ಣನ್ನು ಕಿತ್ತು ತಿನ್ನುವೆನೆ? ನನ್ನ ಕಣ್ಮಣಿ, ನನ್ನ ಪ್ರಾಣಪದಕ ಈ ಮರ, ಬುದ್ಧೀ, ಮತ್ತೊಂದು ಸಲ ಇದನ್ನು ತಬ್ಬಿಕೊಳ್ಳುತ್ತೇನೆ'' ಎಂದು ಎದ್ದು ಹೋಗಿ ಅದನ್ನು ತಬ್ಬಿಕೊಂಡನು. ತನ್ನ ಗಲ್ಲವನ್ನೂ, ಹಣೆಯನ್ನೂ ಅದರ ಮೇಲೆ ಅದುಮಿದನು. ಶೆಟ್ಟರು ಅವನನ್ನು ನೋಡುತ್ತಲೇ ಇದ್ದರು. ''ಸರಿ, ನಾನು ಹೋಗಿ ಬರುತ್ತೇನೆ.'' ಎಂದು ಹೇಳಿ, ವೇಗವಾಗಿ ಹೊರಟುಹೋದನು ಮುದುಕ.

ಆಶ್ಚರ್ಯದಲ್ಲಿ ಮುಳುಗಿದ್ದ ಶೆಟ್ಟರು ತಮ್ಮ ತೋಟದವನ ಹತ್ತಿರ ಎಲ್ಲ ವಿಷಯವನ್ನೂ ವಿಷದವಾಗಿ ವಿಚಾರಿಸಿದರು. ಆ ಮುದುಕನನ್ನು ಬಲವಾಗಿ ಹೊಡೆದನಂತರ ಅವನಿಗೂ ಕೊಂಚ ಪಶ್ಚಾತ್ತಾಪ ಹುಟ್ಟಿತ್ತು. ಮುದುಕನು ತನ್ನನ್ನು ಅಂಗಲಾಚಿದುದನ್ನೂ ತಾನು ತಿರಸ್ಕರಿಸಿದುದನ್ನೂ ಅಂದು ಅವನು

ಆ ಮರವನ್ನು ಬಿಡದೆ ತಬ್ಬಿಕೊಂಡಿದ್ದುದನ್ನೂ ವಿವರಿಸಿ ಹೇಳಿದನು. ಶೆಟ್ಟರು ಇನ್ನೂ ಕೆಲವರನ್ನು ವಿಚಾರಿಸಿದುದರಲ್ಲಿ ಆ ತೋಟದ ಸೌಂದರ್ಯಕ್ಕೂ ಬೆಳವಣಿಗೆಗೂ ಮುದುಕ ಕುಪ್ಪುಸ್ವಾಮಿಯೇ ಕಾರಣವೆಂಬುದಾಗಿ ಅರಿತರು. ‘‘ಅವನನ್ನು ಕರೆತಂದು ತೋಟದಲ್ಲಿ ಕೆಲಸಮಾಡಲು ಹೇಳೋಣ. ಈಗಿರುವವನಿಗೆ ಸಹಾಯಕನಾಗಿರಲಿ.’’ ಎಂದು ಯೋಚಿಸಿದರು.

ಆದರೆ, ಕುಪ್ಪುಸ್ವಾಮಿಯೆಲ್ಲಿ? ಅಂದು ರಾತ್ರಿ ಮನೆಯಲ್ಲಿ ಕಾಣಿಸಿಕೊಂಡನಷ್ಟೇ! ಆಮೇಲೆ ಅವನನ್ನು ಎಲ್ಲರೂ ಹುಡುಕುತ್ತಲಿದ್ದಾರೆ. ತಾನು ಹೋಗುವ ಸ್ಥಳವಾವುದೆಂದು ಮಾವಿನ ಮರಕ್ಕೇನಾದರೂ ಹೇಳಿದನೋ ಏನೋ, ಯಾರು ಕೇಳಿ ತಿಳಿಯಬಲ್ಲರು?

# ನಂದಿ ಹೋದ ದೀಪ

"ಅಪ್ಪಾ ಎಂದರೆ ಯಾರಮ್ಮಾ?"

"ಪಕ್ಕದ ಮನೆಯ ಕೃಷ್ಣನ ತಂದೆಯಿರುವರಲ್ಲಾ, ಅವರ ಹಾಗೆ ನಿನಗೂ ಒಬ್ಬ ಅಪ್ಪನಿರುವರು."

"ಅವರೆಲ್ಲಿ ಅಮ್ಮ?"

"ಊರಿಗೆ ಹೋಗಿರುವರು ಕಂದಾ."

"ಯಾವಾಗ ಬರುತ್ತಾರೆ, ಅಮ್ಮಾ?"

"ಬೇಗನೆ ಬಂದುಬಿಡುವರು."

ಹಾಗೆ ಹೇಳುವಾಗ ಸರಸ್ವತಿಯ ಕಣ್ಣುಗಳಲ್ಲಿ ಕಣ್ಣೀರಿನ ಬಿಂದುಗಳು ಉದುರಿದವು. ದುಃಖ ಗಂಟಲನ್ನು ಬಿಗಿಯಿತು.

"ಬರುವಾಗ ನನಗೆ ಏನೇನಮ್ಮಾ ತರುತ್ತಾರೆ?"

"ಎಲ್ಲವನ್ನೂ ತರುವರು, ಚಿನ್ನಾ! ಪೆಪ್ಪರ್‌ಮಿಂಟು, ಬೂಟ್ಸು, ಗೊಂಬೆ, ಎಲೆಕ್ಟ್ರಿಕ್ ದೀಪ, ರೈಲು ಗಾಡಿ ಎಲ್ಲವನ್ನೂ ತರುವರು."

ಅಷ್ಟರಲ್ಲಿಯೇ, ಜಯರಾಮನು ಚಿಮ್ಮುತ್ತಾ, ನೆಗೆಯುತ್ತಾ ಓಡಿದನು; "ನಮ್ಮಪ್ಪ ಬರುತ್ತಾರೆ! ಏನೇನೋ ತರುತ್ತಾರೆ!" ಎಂದು ಕುತೂಹಲ ದೊಡನೆ ಕೂಗುತ್ತಾ ತನ್ನ ಸ್ನೇಹಿತರ ಗುಂಪಿನೊಳಗೆ ಕಲೆತನು.

* * * *

ಸರಸ್ವತಿಗೆ ಅವನೊಬ್ಬ ಮುದ್ದು ಮಗ. ಅವಳ ಪತಿಯು ಉದ್ಯೋಗ ಸಿಗದೆ ಪೇಚಾಡುತ್ತಿದ್ದನು. ವಿವಾಹವಾಗಿ ಮಗುವನ್ನೂ ಹೆತ್ತುದಾಯಿತು. ಕೆಲಸವಿಲ್ಲದಿದ್ದಲ್ಲಿ ಕುಟುಂಬವನ್ನು ಸಂರಕ್ಷಿಸುವವರಾರು? ಸರಸ್ವತಿ ತವರು

ಮನೆಯ ಮುದ್ದುಗುವರಿ. ಆದುದರಿಂದ ಅಲ್ಲಿಯೇ ಇದ್ದಳು. ಆದರೂ ಎಲ್ಲರ ಗಂಡಂದಿರೂ ವ್ಯಾಪಾರವನ್ನೋ ಉದ್ಯೋಗವನ್ನೋ ಮಾಡುತ್ತಾ ಸಂಪಾದಿಸಿ ಜೀವಿಸುತ್ತಿರುವಲ್ಲಿ ತನ್ನ ಪತಿ ಮಾತ್ರ ಸುಮ್ಮನಿರುವುದನ್ನು ಕಂಡು ಅವಳಿಗೆ ಜುಗುಪ್ಸೆಯುಂಟಾಯಿತು. ಅವನಿಗೆ ತಾನೇ ಏನು ಸಾಧ್ಯ?

ಮಗು ಹುಟ್ಟಿ ಒಂದು ವರ್ಷ ಕಳೆಯಿತು. ಸರಸ್ವತಿಯ ನಲ್ಲನು ದಾಂಪತ್ಯ ಜೀವನದ ಇಂಪನ್ನು ಸಂಪೂರ್ಣವಾಗಿ ಸವಿಯಲಾಗಲಿಲ್ಲ. ಮತ್ತೊಬ್ಬರ ಮನೆಯಲ್ಲಿ ಊಟ ಮಾಡಿಕೊಂಡು ಇದ್ದರೆ ಮನಸ್ಸಿಗೆ ಶಾಂತಿಯುಂಟೇ ? ಸಮುದ್ರವನ್ನು ದಾಟಿಯಾದರೂ ಸಂಪಾದಿಸಬೇಕೆಂಬ ಅಭಿಲಾಷೆ ಅವನಿಗುಂಟಾಯಿತು; ಕ್ರಮೇಣ ವೃದ್ಧಿಹೊಂದಿತು. ಧೈರ್ಯವಾಗಿ ರಂಗೂನಿಗೆ ಹೊರಟುಬಿಟ್ಟನು. ಹೊರಡುವಾಗ "ಪರಮಾತ್ಮನ ಕೃಪೆಯಿಂದಯಿಂದ ನನಗೆ ಒಳ್ಳೆಯ ಉದ್ಯೋಗವೊಂದು ದೊರಕಬಹುದೆಂದು ನಂಬಿದ್ದೇನೆ. ದೊರಕಿದ ಬಳಿಕ ನಿನ್ನನ್ನೂ ಮಗುವನ್ನೂ ಕರೆಸಿಕೊಳ್ಳುತ್ತೇನೆ." ಎಂದು ಹೇಳಿ ಹೋದನು.

ಅಲ್ಲಿ ಕಂಪೆನಿಯೊಂದರಲ್ಲಿ ಕೆಲಸಕ್ಕೆ ಸೇರಿದನು. ಅಷ್ಟೊಂದು ದಿವಸಗಳವರೆಗೆ ನಿರಾಶೆಹೊಂದಿದ ಮರುಭೂಮಿಯಂತಹ ಅವನ ಮನಸ್ಸಿನಲ್ಲಿ ನೀರಿನ ಬುಗ್ಗೆಯೊಂದು ಹೊರಟಿತು. "ಇನ್ನು ಮೇಲೆ ಪ್ರಪಂಚದಲ್ಲಿ ನಾನೂ ಗೌರವಸ್ಥನಾಗಿ ಬದುಕಬಹುದು" ಎಂಬ ಧೈರ್ಯ ಹುಟ್ಟಿತು. ಸರಸ್ವತಿಯನ್ನು ಕರೆತರೋಣವೆಂದು ಯೋಚಿಸಿದನು. "ಇನ್ನೂ ಎರಡು ವರ್ಷಗಳ ಕಾಲ ಒಂಟಿಯಾಗಿದ್ದಲ್ಲಿ ಕೈಯಲ್ಲಿ ಕೊಂಚ ಹಣ ಶೇಖರವಾಗುವುದು. ಅನಂತರ ಕರೆತಂದರೆ ಒಳ್ಳೆಯ ಮನೆಯನ್ನು ಗೊತ್ತು ಮಾಡಿಕೊಂಡು ಸುಖವಾಗಿ ಸಂಸಾರ ನಡೆಸಬಹುದು" ಎಂದು ಮತ್ತೊಂದು ಭಾವನೆ ತಲೆದೋರಿತು. "ಇಷ್ಟೊಂದು ಕಾಲ ಮಡದಿಯೊಡನೆಯೇ ವಾಸಿಸಿದೆನಲ್ಲಾ? ಈಗ ಸ್ವಲ್ಪ ಕಾಲ ಅಗಲಿದ್ದರೆ ಮುಳುಗಿ ಹೋದದ್ದೇನು ?" ಎಂದೂ ನೆನೆದನು. ಸ್ವಲ್ಪ ದಿನ ಕಳೆದನಂತರ ಬಂದು ಕರೆದುಕೊಂಡು ಹೋಗುವುದಾಗಿ ಇನಿಯಳಿಗೆ ಪತ್ರವೊಂದನ್ನು ಬರೆದು ಹಾಕಿಬಿಟ್ಟನು.

ಆರು ತಿಂಗಳು ಉರುಳಿದವು. ಸರಸ್ವತಿಯ ವಲ್ಲಭನು ಬರಲಿಲ್ಲ. ಚೇಳಿಗೆ ಭಯಪಟ್ಟು ಹಾವಿನ ಬಾಯಿಗೆ ಸಿಕ್ಕಿಬಿದ್ದಂತೆ, ಉದ್ಯೋಗವಿಲ್ಲದೆ

ಇರಲು ಭಯಪಟ್ಟು, ಅಗಲಿಕೆಯೆಂಬ ಜ್ವಾಲೆಗೆ ಸಿಲುಕಿಬಿದ್ದ ಸರಸ್ವತಿಯ ಮನವು ಸಮುದ್ರದಲೆಗಳಲ್ಲಿ ಸಿಲುಕಿಬಿದ್ದ ಕಡ್ಡಿಯಂತೆ ಪರಿತಪಿಸಿತು.

ನೀವಿಲ್ಲಿದ್ದಾಗ ಪದೇ ಪದೇ ನಾನು ನಿಮ್ಮನ್ನು ಏನಾದರೊಂದು ಕೆಲಸ ಹುಡುಕುವಂತೆ ಪೀಡಿಸುತ್ತಿದ್ದೆ. ಅದಕ್ಕೋಸ್ಕರ ನನಗೆ ಈ ದಂಡನೆಯೇನು ? ನನ್ನನ್ನು ಇನ್ನೂ ಮುಂದೆ ಪರೀಕ್ಷಿಸಬೇಡಿ. ನಿಮ್ಮ ಮಗು ಅದೆಷ್ಟೊಂದು ಮುದ್ದಾಗಿದ್ದಾನೆ ! ಎಷ್ಟು ಚೆನ್ನಾಗಿ ಆಟವಾಡುತ್ತಾನೆ. ಅವನ ತೊದಲ್ನುಡಿಯನ್ನು ನೀವು ಕೇಳಬೇಡವೇ ? ನನಗಾಗಿ ನೀವು ಹೊರಟುಬಾರದಿದ್ದರೂ ಅವನಿಗೋಸ್ಕರವಾಗಿಯಾದರೂ ಬನ್ನಿ" ಎಂದು ಅವಳು ಕಾಗದ ಬರೆದಳು.

"ಲೇ ಹುಚ್ಚಿ ; ನನ್ನ ಮಗುವನ್ನೂ ನೋಡಬೇಕೆಂದು ನನಗೆ ಆಶೆಯಿಲ್ಲವೇನು ? ಇಲ್ಲಿ ನನಗೆ ರಜಾ ಸಿಗುವುದು ಬಹಳ ಕಷ್ಟವಾಗಿದೆ. ಅಲ್ಲದೆ ಇಲ್ಲಿ ಸ್ವತಃ ಇದ್ದು ಗಮನಿಸಬೇಕಾದ ಕಾರ್ಯವೊಂದಿದೆ. ಅದು ಮುಗಿದು ಬಿಟ್ಟಲ್ಲಿ ನಮ್ಮ ಕಂಪೆನಿಯ ದೊರೆಯು ನನಗೆ ಸಂಬಳ ಹೆಚ್ಚಿಸುವನು. ನಾನು ಆ ಕಾರ್ಯವನ್ನು ಪೂರ್ತಿಗೊಳಿಸಿ ನನಗೆ ಸಂಬಳ ಅಧಿಕವಾದಲ್ಲಿ ಅದು ನಮ್ಮಿಬ್ಬರಿಗೂ ಒಳ್ಳೆಯದಲ್ಲೋ ? " ಎಂದು ಉತ್ತರ ಬಂದಿತು.

ಇನ್ನೂ ಆರು ತಿಂಗಳು ಕಳೆದವು. "ಒಂದು ವರ್ಷವಾಗಿ ಬಿಟ್ಟಿತಲ್ಲಾ, ನಿಮ್ಮ ಮನಸ್ಸು ಕರಗಲಿಲ್ಲವೇ ? ನಿಮಗೆ ನಾನೆಂಥ ತಪ್ಪಿತವನ್ನು ಮಾಡಿದೆನು ? " ಎಂದು ಬರೆದಳು ಸರಸ್ವತಿ.

ಒಂದು ತಿಂಗಳ ಬಳಿಕ "ನಾನೀಗ ಪ್ರವಾಸ ಕಾರ್ಯದಲ್ಲಿರುವೆನು. ಈ ಪ್ರವಾಸ ಇನ್ನೂ ಮೂರು ತಿಂಗಳ ಕಾಲ ಬೆಳೆಯುವುದು. ಅನಂತರ ನಾನಲ್ಲಿಗೆ ಬರುವ ವಿಷಯವನ್ನು ಕುರಿತು ಯೋಚಿಸಿ ಬರೆಯುವೆನು. ಮಗುವನ್ನು ಜೋಪಾನವಾಗಿ ನೋಡಿಕೊ" ಎಂದು ಉತ್ತರ ಬಂದಿತು.

ಒಂದು ವರ್ಷದನಂತರದಲ್ಲಿ ಮತ್ತೊಂದು ವರ್ಷ ಕಳೆಯಿತು. ಮೂರು ವರ್ಷವೂ ಆಯಿತು. ಈಗ ಜಯರಾಮನು ತನ್ನ ಐದನೆಯ ಪ್ರಾಯದಲ್ಲಿ ಹೆಜ್ಜೆಯಿಟ್ಟನು. ಅವನ ಇಂಪಾದ ತೊಲ್ನುಡಿಗಳನ್ನು ಕೇಳುವಾಗಲೆಲ್ಲಾ ಸರಸ್ವತಿಯು ಕಣ್ಣೀರ್ಗರೆಯುವಳು ; "ಇದನ್ನವರು ಕೇಳಲಾಗಲಿಲ್ಲವಲ್ಲಾ ! " ಎಂದು ಬಿಕ್ಕಳಿಸುವಳು.

ಈ ನಾಲ್ಕು ವರ್ಷಗಳಲ್ಲಿ ಅವರಿಬ್ಬರ ನಡುವೆ ಪತ್ರಾವಲೋಕನಕ್ಕೆ ಕೊರತೆಯೇನೂ ಇಲ್ಲ. ಆ ಪತ್ರಗಳಲ್ಲಿ ಪ್ರೇಮಾಮೃತ ವರ್ಷಕ್ಕೂ ಕೊರತೆ ಯೇನೂ ಇಲ್ಲ. ತನ್ನ ಪ್ರಾಣಕಾಂತನ ಪ್ರೇಮಭರಿತವಾದ ಪತ್ರಗಳನ್ನು ಭದ್ರವಾಗಿ ಕಾಪಾಡಿ ಬಂದಳು ಸರಸ್ವತಿ. ಪ್ರತಿಯೊಂದು ಪತ್ರವೂ ತಲುಪಿ ದಾಗ ಅವಳು "ನಾನು ಮುಂದಿನ ಜಹಜಿನಲ್ಲಿ ಬರುತ್ತೇನೆಂದು ಬರೆದಿರ ಬಾರದೇ ?" ಎಂದು ಆತುರದೊಡನೆ ಓದಿ ನೋಡುವಳು, ಕೊನೆಯವರೆಗೂ ಓದಿನೋಡುವಳು. ತಾನು ಬಾರದೆ ಇರುವುದಕ್ಕೊಂದು ಕಾರಣವನ್ನು ಬರೆ ದಿರುವನು ವಲ್ಲಭನು. ಅದರೊಂದಿಗೆ ಮುಂದಿನ 'ವಾಯಿದೆ'ಯನ್ನೂ ಬರೆದಿರುವನು. ಅವಳೇನು ಮಾಡಲಾದೀತು! ನಿಟ್ಟುಸಿರೊಂದನ್ನು ಬಿಟ್ಟು, ಕಣ್ಣೀರಿನಿಂದ ಆ ಕಾಗದಕ್ಕೆ ಮುದ್ರೆಯೊತ್ತಿ ತನ್ನ ಪೆಟ್ಟಿಗೆಯಲ್ಲಿ ಶೇಖರಿಸಿಟ್ಟಿ ರುವ ಹಳೆಯ ಕಾಗದಗಳೊಡನೆ ಜೋಡಿಸುವಳು. ಈ ರೀತಿಯಲ್ಲಿ ಅದೆ ಷ್ಟೊಂದು ಸಲ ಮೋಸ ಹೋದಳು !

*   *   *   *

"ತಾಯೀ, ಪೋಸ್ಟು, ಸರಸ್ವತಮ್ಮನವರಿಗೆ" ಎಂದನು ಪೋಸ್ಟ್‌ಮಾನ್. ತನ್ನ ತಾಯಿಗೂ ಮುಂಚಿತವಾಗಿ ಓಡಿಹೋಗಿ ಅದನ್ನು ತಂದುಕೊಟ್ಟನು ಮಗು. ಅದರಲ್ಲೇನಿದೆ ? ಅವಳ ನೇತ್ರಗಳಲ್ಲಿ ಇಷ್ಟೊಂದು ಪ್ರಕಾಶವೇಕೆ ! ಅವಳ ವದನವೆಷ್ಟೊಂದು ಪ್ರಫುಲ್ಲಿತವಾಗಿದೆ ! ಇದೇಕೆ ! ಥಟ್ಟನೆ ಆ ವದನ ದಲ್ಲಿ ಮೇಘ ಮುಸುಕು ಹಾಕಿದಂತೆ ಆ ಬಳಲಿಕೆಯೇಕೆ ಉಂಟಾಗಿದೆ ? ಎಂಜಲನ್ನೇಕೆ ಅವಳು ನುಂಗುತ್ತಿರುವಳು ?

ಮಗು ಬಾಯಲ್ಲಿ ಬೆರಳಿಟ್ಟುಕೊಂಡು ತನ್ನ ಮಾತೆಯ ಮುಖಾರ ವಿಂದವನ್ನು ನೋಡುತ್ತಿದ್ದನು. ಆ ಮುಖದಲ್ಲಿ ಹಠಾತ್ತನೆ ತೋರಿದ ಪ್ರಕಾ ಶದ ಅರ್ಥವನ್ನೂ ಮರುಕ್ಷಣವೇ ಅದು ಅಳಿದು ಹೋದ ಕಾರಣವನ್ನೂ ಅವನು ಹೇಗೆ ತಿಳಿದಾನು ?

ಪತಿ ಬರುತ್ತಾನೆ; ನಿಜ. ಈ ವಿಷಯವೇ ಅವಳ ಮುಖದಲ್ಲಿ ಶೋಭೆ ಯನ್ನುಂಟುಮಾಡಿತು. ಆದರೆ—? ಅವನ ಹಳೆಯ ದಾರ್ಢ್ಯವುಳ್ಳ ದೇಹವು ಬರುವುದಿಲ್ಲ; ಕ್ಷಯರೋಗದಿಂದ ಕುಗ್ಗಿ ಹೋದ ದೇಹವೇ ಬರುತ್ತದೆ!

"ಅಯ್ಯೋ ಭಗವಂತ!" ಎಂದು ಅವಳು ತಲೆಯ ಮೇಲೆ ಕೈಯನ್ನು ಅದುಮಿಕೊಂಡಳು.

"ನನ್ನ ಚಿನ್ನಾ, ನಿನ್ನ ಹತ್ತಿರ ಇನ್ನು ಮರೆಮಾಚುವುದರಲ್ಲಿ ಪ್ರಯೋಜನವೇನೂ ಇಲ್ಲ. ಮಿತಿಮೀರಿದ ಕೆಲಸದ ದೆಸೆಯಿಂದ ನನ್ನ ಸ್ವೈ ಕೆಟ್ಟುಹೋಯಿತು. ಅಲ್ಲಿ ಸುಖಭೋಗವನ್ನು ಅನುಭವಿಸುತ್ತಿದ್ದ ಈ ದೇಹವು ಇಲ್ಲಿಯ ಹೊಸ ಶೀತೋಷ್ಣ ಸ್ಥಿತಿಯನ್ನೂ ಅಲೆದಾಟವನ್ನೂ ತಡೆಯಲಾರದೆ ಹೋಯಿತು. ಕಳೆದ ವರ್ಷವೇ ನನಗೆ ಕ್ಷಯರೋಗ ಕಾಣಿಸಿಕೊಂಡಿತು. ಆವಶ್ಯಕವಾದ ಒಳ್ಳೊಳ್ಳೆಯ ಔಷಧ ಉಪಚಾರಗಳನ್ನು ಮಾಡಿಸಿಕೊಂಡು ಕಾಯಿಲೆ ತೊಲಗಿದನಂತರ ಅಲ್ಲಿಗೆ ಬರೋಣವೆಂದು ಭಾವಿಸಿದ್ದೆನು. ಆದರೆ ಇದು ನನಗೆ ಪ್ರಾಣಕ್ಕೆ ಕಂಟಕವಾಗಿ ಬಂದಿದೆ. ಇದುವರೆಗೂ ಇದನ್ನು ನಿನ್ನಲ್ಲಿ ಮರೆಮಾಚಿನೆ. ಇಷ್ಟರ ಮೇಲೆ ಮರೆಮಾಚುವುದರಿಂದೇನೂ ಉಪಯೋಗವಿಲ್ಲ. ನನ್ನ ಅಂತ್ಯಕಾಲ ಸಮೀಪಿಸುತ್ತಿದೆ. ಇದನ್ನು ತಿಳಿಸದೆಯೇ ಅಲ್ಲಿಗೆ ಬಂದು ಬಿಡೋಣವೆಂದು ಯೋಚಿಸಿದೆ. ಹೇಗಾದರೇನು? ಹೇಗೂ ತಿಳಿದೇ ತಿಳಿಯುತ್ತದೆ. ಹಠಾತ್ತಾಗಿ ತಿಳಿಯುವುದಕ್ಕಿಂತಲೂ ಮುಂಚಿತವಾಗಿಯೇ ತಿಳಿಯುವುದು ಸ್ವಲ್ಪ ಮಾತ್ರವಾದರೂ ಸಮಾಧಾನ ಉಂಟುಮಾಡುವುದು. ನನ್ನ ಅಂತ್ಯಕಾಲದಲ್ಲಾದರೂ ನಾನು ನನ್ನ ಸಮೀಪದಲ್ಲಿರುವಂತೆ ಪರಮಾತ್ಮನು ಅನುಗ್ರಹಿಸುವನೆಂದು ನಂಬುತ್ತೇನೆ. ಅಷ್ಟು ಮಾತ್ರವಲ್ಲದೆ ದೀನನಾಗಿ ಮತ್ತೊಬ್ಬರ ಮನೆಯಲ್ಲಿ ಊಟ ಉಂಡು ಸಾಯಬೇಕಾದ ಸ್ಥಿತಿಯಲ್ಲಿ ನಾನು ಈಗ ಇಲ್ಲವೆಂಬುದು ನನಗೀಗ ತೃಪ್ತಿಯನ್ನುಂಟುಮಾಡಿದೆ. ನನ್ನ ಮಗುವಿಗೆ ನನ್ನ ಕಾಲವಾದನಂತರ ಮತ್ತೊಬ್ಬರ ಕೈಯನ್ನು ನಿರೀಕ್ಷಿಸದೆ ಸ್ವತಂತ್ರವಾಗಿ ಬದುಕಲು ಆವಶ್ಯಕವಾದ ಹಣ ನನ್ನ ಹತ್ತಿರದಲ್ಲಿ ಈಗ ಇದೆಯೆಂಬುದನ್ನು ನಿನಗೆ ತಿಳಿಸುತ್ತೇನೆ. ನಮಗೊಂದು ಪ್ರತ್ಯೇಕವಾದ ಮನೆಯನ್ನು ಗೊತ್ತುಮಾಡುವಂತೆ ನಿಮ್ಮಣ್ಣನಿಗೆ ತಿಳಿಸು. ನಿನ್ನನ್ನು ಶೀಘ್ರದಲ್ಲಿನೋಡಬೇಕೆಂಬ ಅಭಿಲಾಷೆ ವಿಷದಂತೆ ಕ್ಷಣ ಕ್ಷಣಕ್ಕೂ ಹೆಚ್ಚಾಗುತ್ತಿದೆ." ಈ ರೀತಿಯಾಗಿ ಅವನು ಬರೆದಿದ್ದನು. ಸರಸ್ವತಿಯ ಮನೋರಾಜ್ಯವು ನೆಲಸಮವಾಯಿತು. ಅದರಲ್ಲಿ ಅವಳು ಕಲ್ಪಿಸಿಕೊಂಡಿದ್ದ ಭವ್ಯ ಭವನಗಳೂ ಶೃಂಗಾರ ವನಗಳೂ, ತಂಪಾದ ನೀರಿನ ಬುಗ್ಗೆಗಳೂ ಪ್ರಳಯಕಾಲದ

ಪ್ರವಾಹದಲ್ಲಿ ಮುಳುಗಿಹೋದುವು. ಬರುವನು, ಬರುವನೆಂದು ಅವಳು ಇದಿರು ನೋಡಿದ್ದಳು; ಬರಲಿಲ್ಲ. ಈಗಲಾದರೋ ಬರುತ್ತಾನೆ; ಆದರೂ ಆನಂದವಿಲ್ಲ.

* * * *

ಬಂದು ಸೇರಿದನು; ಈ ರೋಗದ ವಿನಾಶ ಶಕ್ತಿ ಎಷ್ಟು ನಿಷ್ಠುರವಾದದ್ದು. ಸೌಂದರ್ಯ, ಆಕರ್ಷಣ, ದಾರ್ಢ್ಯ, ಸಕಲವೂ ನೆರೆದಿದ್ದ ಅವನ ದೇಹ ಈಗ ಕುಗ್ಗಿ ಹೋಗಿ ಬರಿಯ ಅಸ್ಥಿಪಂಜರವಾಗಿದ್ದಿತು. ದೊಡ್ಡ ದೊಡ್ಡ ವೈದ್ಯರನೇಕರು ನೋಡಿದರು. "ಮಿಂಚಿ ಹೋಯಿತು" ಎಂದು ಎಲ್ಲರೂ ಹೇಳಿಬಿಟ್ಟರು.

ಅವನು ಬರುವಾಗ ಜಯರಾಮುನಿಗೆ ಎಷ್ಟೊಂದು ಅಪೂರ್ವವಾದ ಸಾಮಾನುಗಳನ್ನು ಕೊಂಡು ತಂದನು; ಜರ್ಮನಿ ದೇಶದ ಗೊಂಬೆಗಳು, ರಂಗೂನಿನ ಮಿಠಾಯಿಗಳು, ಚೀನಾ ದೇಶದ ಸಾಮಾನುಗಳು ಎಲ್ಲವನ್ನೂ ತಂದನು. ಅದ್ಭುತವಾದ ಕೈವಾಡದಿಂದ ಕೆಲಸ ಮಾಡಿದ್ದ ಎಲೆಕ್ಟ್ರಿಕ್ ಟಾರ್ಚ್ ದೀಪವೊಂದನ್ನು ಸಹ ತಂದಿದ್ದನು. ಅದರಲ್ಲಿರುವ ಗುಂಡಿಯನ್ನು ಅದುಮಿದಲ್ಲಿ ಪ್ರಕಾಶಮಯವಾಗಿ ಬೆಳಕು ಹರಿಯುವುದು. ಬೆಳಕುಂಟಾಗುವಾಗ ಜಯರಾಮುನಿಗೆ ವರ್ಣಿಸಲಸಾಧ್ಯವಾದ ಆನಂದವುಂಟಾಗುವುದು.

ತನ್ನ ತಾಯಿ ಸದಾ ಕಾಲವೂ ತನಗೆ 'ಅಪ್ಪಾ, ಅಪ್ಪಾ' ಎಂದು ಹೇಳಿಕೊಟ್ಟ ಮಂತ್ರದಿಂದ ಮನವರಿಕೆಯಾದ ಮನುಷ್ಯನು, ಬಾಡಿ ಬತ್ತಿಹೋದ ದೇಹ ಹೊಂದಿದ ರೋಗಿಷ್ಠನೆಂದು ಆ ಮಗು ಅರಿತಾಗ ಅವನಿಗೆ ಆ 'ಅಪ್ಪನ' ಮೇಲೆ ಅಷ್ಟೊಂದು ಆಕರ್ಷಣೆ ಉಂಟಾಗಲಿಲ್ಲ. 'ಅಪ್ಪನು' ಮಾತ್ರ ಮಗುವನ್ನು ಬಹಳ ಪ್ರೀತಿವಾತ್ಸಲ್ಯದೊಡನೆ ತಬ್ಬಿಕೊಂಡು ಮುದ್ದಾಡಿದನು. ಮಗು ಆ ಪ್ರೇಮಕ್ಕೆ ಸರಿದೂಗಿದ ಬೆಲೆಯನ್ನು ಕೊಡಲಿಲ್ಲ. ಅವನಿಗೆ 'ಅಪ್ಪ'ನೆಂದರೇ ಬಗೆ ಹರಿಯಲಿಲ್ಲ. ಆದರೆ ಅಪ್ಪನಿಗಿಂತ ಅಪ್ಪನು ತಂದ ಸಾಮಾನುಗಳ ಮೇಲೆ ಅವನ ಶಿಶು ಹೃದಯವು ತಲ್ಲೀನವಾಯಿತು. ಅವುಗಳೆಲ್ಲದರಲ್ಲೂ ಆ 'ಟಾರ್ಚ್' ದೀಪದಲ್ಲಿ ಅವನಿಗೆ ಅಧಿಕವಾದ ಆಶೆ ಹುಟ್ಟಿತು. ತನ್ನ ಸ್ನೇಹಿತರೊಬ್ಬರನ್ನೂ ಬಿಡದೆ ಎಲ್ಲರಿಗೂ ಅದನ್ನು ತೆಗೆದುಕೊಂಡು ಹೋಗಿ ತೋರಿಸಿದನು.

"ಇಲ್ಲಿ ನೋಡು" ಎನ್ನುವನು. ಪಕ್ಕದ ಮನೆಯ ಹುಡುಗನು ನೋಡುತ್ತಿರುವಷ್ಟರಲ್ಲಿಯೇ ಅವನ ಕಣ್ಣಿಗೆ ನೇರಾಗಿ ಆ ದೀಪವನ್ನು ಹೊತ್ತಿಸಿ ಬಿಡುವನು. ಆ ಹುಡುಗನ ಕಣ್ಣಿನ ಮೇಲೆ ಥಟ್ಟನೆ ಬೆಳಕು ಹರಿಯುವುದು. "ಅಬ್ಬಬ್ಬಾ" ಎಂದು ಅವನು ಕಿರಿಚುವನು. ಆ ಕೂಗಿನಲ್ಲಿ ಜಯರಾಮುನಿಗೊಂದು ತರಹ ಆನಂದ.

"ಇದು ಯಾರು ಕೊಟ್ಟರು ?"

"ಅಪ್ಪ"

"ಅಪ್ಪನು ಯಾರು ?"

"ಇದನ್ನು ಕೊಟ್ಟರಲ್ಲಾ, ಅವರೇ"

ಇಷ್ಟು ಮಾತ್ರವೇ ಅವನಿಗ ತನ್ನ ತಂದೆಯ ಸಂಬಂಧವಾಗಿ ತಿಳಿದ ವಿಷಯ.

*　　*　　*　　*

ಸಂಧ್ಯಾಕಾಲ, ಸೂರ್ಯನು ಅಸ್ತಂಗತನಾದನು. ಮನೆಗಳಲ್ಲಿ ಸಕಲರೂ ದೀಪವನ್ನು ಹೊತ್ತಿಸಿದರು. ಜಯರಾಮುನು ಕೂಡ ತನ್ನ ಅಮ್ಮನು ಹೇಳಿದಂತೆ ಟಾರ್ಚು ದೀಪವನ್ನು ರಾತ್ರಿಯ ವೇಳೆಯಲ್ಲಿ ಮಾತ್ರವೇ ಹೊತ್ತಿಸಿ ತಮಾಷೆ ನೋಡುವುದು ಪದ್ಧತಿ. ಅಂದು ಮನೆಯೆಲ್ಲವೂ ಒಂದೇ ಕಳವಳದಲ್ಲಿ ಮುಳುಗಿದ್ದಿತು. ಸರಸ್ವತಿ ಶೋಕವೇ ಮೂರ್ತಿಮತ್ತಾಗಿದ್ದಳು. ಅವಳ ಪತಿದೇವನ ಪ್ರಾಣ ಯಮನೊಡನೆ ಹೋರಾಡುತ್ತಿದ್ದಿತು.

ಜಯರಾಮುನು ಕೈಯಲ್ಲಿ ಟಾರ್ಚು ದೀಪವನ್ನು ತೆಗೆದನು. ಅದುಮಿದನು. ದೀಪ ಉರಿಯಲಿಲ್ಲ. ನಂದಿ ಹೋಯಿತು. ಅದೇ ಸಮಯದಲ್ಲಿ ಸರಸ್ವತಿಯ ಸೌಮಂಗಲ್ಯ ಸೌಭಾಗ್ಯಕ್ಕೆ ಆಧಾರವಾದ ದೀಪವೂ ನಂದಿ ಹೋಯಿತು. ಎಲ್ಲೆಲ್ಲೂ ಅಳು.

"ಅಯ್ಯಯ್ಯೋ, ಈ ದೀಪ ನಂದಿ ಹೋಯಿತು. ಇದನ್ನು ಹೊತ್ತಿಸಿ ಕೊಡೇ" ಎಂದು ಜಯರಾಮುನು ತನ್ನ ತಾಯಿಯ ಸೆರಗನ್ನು ಹಿಡಿದುಕೊಂಡು ಅಳತೊಡಗಿದನು. ಎಲ್ಲರೂ ಅಳುವಾಗ ಅವನಿಗೂ ಅಳಬೇಕೆಂದು ತೋರಿತು. ಅದಕ್ಕೊಂದು ಕಾರಣ ಸಹ ಒದಗಿತು. ಬಲವಾಗಿ ಅಳ

ತೊಡಗಿದನು. ಹೃದಯವನ್ನು ಸೀಳಿಕೊಂಡು ಹೊರಟ ದುಃಖಾವೇಶದಿಂದ ಪೀಡಿತರಾದ ಆ ಗುಂಪಿನವರ ರೋದನದ ಘೋಷದಲ್ಲಿ ಕಪಟವರಿಯದ ಆ ಮಗುವಿನ ಸಣ್ಣ ಸ್ವರವು ಬೆರೆತುಕೊಂಡಿತು. ಅವರುಗಳು ಒಂದು ದೀಪ ನಂದಿ ಹೋಯಿತೆಂದು ಅಳುತ್ತಾರೆ; ಅವನೂ ಕೂಡ ಒಂದು ದೀಪ ನಂದಿ ಹೋಯಿತೆಂದು ಅಳುತ್ತಾನೆ!

# ಮುದುಕಿಯ ಸೇವೆ

ಬಿಸಿಲು, ಧಗಧಗಿಸುವ ಬಿಸಿಲು. ಆ ಬಿಸಿಲಿನಲ್ಲಿ ಒಡ್ಡರೂ ಶಿಲ್ಪಿಗಳೂ ಕಲ್ಲು ಕುಟಿಗರೂ ಕೆಲಸ ಮಾಡುತ್ತಿದ್ದರು. ಅವರಿಗೆ ಕೆಲಸದ ಮೇಲೆ ಕಣ್ಣು. ಬಿಸಿಲ ತಾಪವು ಅಷ್ಟಾಗಿ ಮನದಟ್ಟಾಗಲಿಲ್ಲ. ಸಾವಿರಗಟ್ಟಲೆ ಕೂಲಿಗಾರರು ಅಲ್ಲಿ ಕೆಲಸ ಮಾಡುತ್ತಿದ್ದರು. ನೂರಾರು ಮಂದಿ ಶಿಲ್ಪಿಗಳು ತಮ್ಮ ಕಲಾ ಕೌಶಲ್ಯವನ್ನು ತೋರಿಸಿದರು. ಚೋಳ ಚಕ್ರವರ್ತಿ ರಾಜರಾಜ ಚೋಳ ಶಿವಪಾದಶೇಖರನು ಬಹು ದಿನಗಳಿಂದ ನೆನೆಸಿಕೊಂಡಿದ್ದ ಕೆಲಸವದು, ಬ್ರಹ್ಮಾಂಡದಂಥ ಒಂದು ದೇವಾಲಯವನ್ನು ತಂಜಾವೂರು ನಗರದಲ್ಲಿ ನಿರ್ಮಿಸಬೇಕೆಂದು ಚಾತುರ್ಯದೊಡನೆ ಪ್ರಾರಂಭಿಸಿದ ಪ್ರಯತ್ನವದು.

ಚೋಳದೇಶದ ಚತುರ ಶಿಲ್ಪಿಗಳು ಆ ದೇವಾಲಯದ ನಿರ್ಮಾಣ ಕಾರ್ಯದಲ್ಲಿ ನಿರತರಾಗಿದ್ದರು. ಚಕ್ರವರ್ತಿ ಸಾರ್ವಭೌಮನು ನರ್ಮದಾ ನದಿಯಿಂದ ಬಹು ದೊಡ್ಡ ಬಾಣಲಿಂಗವನ್ನು ತಂದು ಜಲವಾಸ ಮಾಡಿಸಿದ್ದನು. ತಂಜಾವೂರಿಗೆ ಮೂರು ಮೈಲಿ ದೂರದಿಂದಲೂ ದೇವಾಲಯಕ್ಕೆ ಸಾರುವೆಯನ್ನು ಕಟ್ಟಿದ್ದರು. ಆ ಸ್ಥಳಕ್ಕೆ "ಸಾರಪಳ್ಳ" (ಸಾರ್ವೆಯ ಹಳ್ಳ) ಎಂದು ಈಗಲೂ ಕರೆಯುತ್ತಾರೆ.

ದಿನದಿನಕ್ಕೆ ದೇವಾಲಯವು ರೂಪುಗೊಳ್ಳಲಾರಂಭಿಸಿತು. ಅದನ್ನು ನೋಡಿ ರಾಜರಾಜನು ಹುರಿದುಂಬಿದನು.

ದೇವಾಲಯದ ಗೋಪುರವನ್ನು ಸಾಧ್ಯವಾದಷ್ಟು ಗಗನವನ್ನು ಮುಟ್ಟುವಂತೆ ನಿರ್ಮಿಸಿಬಿಡಬೇಕೆಂಬುದು ಅವನ ಅಭಿಲಾಷೆ. ಅವನ ಮನಸ್ಸು ಅಂತಹ ಒಂದು ಗೋಪುರವನ್ನು ಕಲ್ಪಿಸಿಕೊಂಡು ನೋಡಿತು.

ಅದರಂತೆಯೇ ಮಾಡುವುದು ಮನುಷ್ಯನಿಂದ ಸಾಧ್ಯವೇ ? ಮನಸ್ಸು ಕಲ್ಪನೆಯನ್ನು ಮಾಡಿಕೊಳ್ಳುವಂತೆಯೇ ಕೈಯೂ ಮಾಡಿಬಿಟ್ಟಲ್ಲಿ ದೇವ

ಲೋಕವೆಂದು ಒಂದು ಇರಬೇಕಾಗಿಯೇ ಇಲ್ಲ. ಅದು ಭೂಲೋಕಕ್ಕೆ ಒಳಪಟ್ಟು ನಡೆಯಬೇಕಷ್ಟೇ. ಆದರೆ ಭಗವಂತನು ಹಾಗೆ ಜಗತ್ತನ್ನು ನಿರ್ಮಿಸಿಲ್ಲ. ಮನುಷ್ಯನು ಭಾವಿಸುವಂತೆ ಮಾಡಿದನು. ಆದರೆ ಭಾವಿಸಿದ ಹಾಗೆಲ್ಲ ಮಾಡಲು ಅವನಿಗೆ ಶಕ್ತಿಯನ್ನು ಕೊಡಲಿಲ್ಲ.

ತನ್ನ ಅಭೀಷ್ಟವೆಲ್ಲವೂ ನೆರವೇರದೆ ಹೋದರೂ ಕೂಡ ಪ್ರಯತ್ನಿಸ ಬೇಕೆಂಬುದಾಗಿ ನಿಶ್ಚಯಿಸಿಕೊಂಡನು ದೊರೆ. ಶಿಲ್ಪಿಗಳು ದೇವಾಲಯದ ವಿಮಾನವನ್ನು ನಿರ್ಮಿಸಲು ತೊಡಗಿದರು. ತಳದ ಪೀಠದಲ್ಲಿ ವಿಮಾನದ ಎತ್ತರಕ್ಕೆ ಆವಶ್ಯಕವಾದ ಅಸ್ತಿಭಾರವನ್ನು ಹಾಕಿದರು. ರಾಜರಾಜನ ಕೀರ್ತಿ ಯಂತೆಯೇ, ತಮಿಳುನಾಡಿನ ಕಲಾಕೌಶಲ್ಯದ ಸಂಪತ್ತಿನ ಏಳಿಗೆಯ ಹಾಗೆ, ಗೋಪುರವು ಗಗನಕ್ಕೆ ತಲೆಯನ್ನು ಎತ್ತಲು ತೊಡಗಿತು.

ವಿಮಾನದ ಮೇಲೆ ಬಿಸಿಲಿನ ತಾಪದಲ್ಲಿ ಕೆಲಸ ಮಾಡುತ್ತಿದ್ದ ಶಿಲ್ಪಿಗಳು ಚೋಳದೇಶದ ಸಾರ್ವಭೌಮನ ಪ್ರೀತಿಗೆ ಪಾತ್ರರಾದರು. ಅವರ ಊಟ ಉಪಚಾರದ ಸೌಕರ್ಯಗಳ ವಿಷಯದಲ್ಲಿ ಆತನು ಸ್ವಲ್ಪವೂ ಕೊರತೆಯಿಲ್ಲದೆ ಏರ್ಪಾಟು ಮಾಡಿದನು. ಕಲಾವಿದರ ಗೌರವತೆಯನ್ನು ಅವನು ಚೆನ್ನಾಗಿ ಮನಗಂಡಿದ್ದನು. ಆ ಬಿಸಿಲಿನಲ್ಲಿ ಅವರಿಗೆ ಬಾಯಾರಿಕೆ ಉಂಟಾದಲ್ಲಿ ಯಾರಾದರೂ ಸೇವಕನೊಬ್ಬನು ಬಂದು ಅವರಿಗೆ ಕುಡಿಯಲು ನೀರನ್ನು ತಂದು ಕೊಡುವನು. ಅದು ಬಹಳ ಇಂಪಾಗಿಯೂ ತಂಪಾಗಿಯೂ ಇರುವುದು. ಕೊಳದಿಂದ ತಂದ ನೀರಾದಲ್ಲಿ ಅಷ್ಟೊಂದು ತಣ್ಣಗೆ ಇರಲಾರದು. ಶಿಲ್ಪಿಗಳು ಆ ನೀರು ಅಷ್ಟೊಂದು ತಂಪಾಗಿಯೂ ಸುಗಂಧಮೂಲ ದಿಂದ ಸುವಾಸಿತವಾಗಿಯೂ ಇರುವುದನ್ನು ಕಂಡು ''ಇದು ಎಲ್ಲಿಂದ ಬರುತ್ತದೆ ?'' ಎಂದು ವಿಚಾರಿಸತೊಡಗಿದರು.

ಮುದುಕಿಯೊರ್ವಳ ಕೈಂಕರ್ಯವದು. "ನಮ್ಮ ಮಹಾರಾಜರು ಅದೆಷ್ಟೊಂದು ಆಶೆಯಿಂದ ಈ ದೇವಾಲಯವನ್ನು ಕಟ್ಟಿಸುತ್ತಾರೆ. ಇವರೆಲ್ಲರೂ ಬಹಳ ಶ್ರದ್ಧೆಯಿಂದ ಕೆಲಸ ಮಾಡುತ್ತಾರೆ. ನಾವೂ ಈ ಕೈಂಕರ್ಯದಲ್ಲಿ ಬೆರೆತುಕೊಳ್ಳಬೇಕು'' ಎಂದು ಯೋಚಿಸಿದಳು ಆಕೆ. ''ನಮ್ಮಿಂದ ಸಾಧ್ಯವಾದದ್ದು ಇದಿಷ್ಟೇ." ಎಂದು ಭಾವಿಸಿ ಪ್ರತಿನಿತ್ಯವೂ ಮುಂಜಾನೆ

ಯಲ್ಲಿಯೇ ಎದ್ದು ದೊಡ್ಡ ದೊಡ್ಡ ಹಂಡೆಗಳಲ್ಲಿ ನೀರನ್ನು ತುಂಬಿ ಸುಗಂಧದ ಬೇರು ಮುಂತಾದುದನ್ನು ಹಾಕಿಡುವಳು. ಕೆಲಸಗಾರರು ಅಲ್ಲಿಗೆ ಬಂದು ದಾಹಶಾಂತಿಯನ್ನು ಮಾಡಿಕೊಳ್ಳುವರು. ಗೋಪುರ ನಿರ್ಮಾಣಕಾರ್ಯ ದಲ್ಲಿ ನಿರತರಾಗಿರುವವರಿಗೆ ಸಣ್ಣ ಪುಟ್ಟ ಕೆಲಸಗಾರರರು ಹೋಗಿ ಕೊಟ್ಟು ಬರುವರು.

"ಇಷ್ಟೊಂದು ಶ್ರದ್ಧೆ ವಹಿಸಿಕೊಂಡು ನಮಗೆ ನೀರಡಿಕೆಗೆ ನೀರು ತರುವ ಈ ಮುದುಕಿಯಾರು ?" ಎಂದು ಶಿಲ್ಪಿಗಳು ಆಶ್ಚರ್ಯಗೊಂಡರು. ಪ್ರತಿ ದಿವಸವೂ ಸಾಯಂಕಾಲ ಕೆಲಸ ಮುಗಿಸಿಕೊಂಡು ಆ ಮುದುಕಿಯ ಬಳಿ ಬಂದು ಮಾತನಾಡಿಕೊಂಡು ಹೋಗುವರು. ಅವಳು ಸಹ ಬಹಳ ಪ್ರೀತ್ಯಾ ದರದೊಡನೆ ಅವರಿಗೆ ಏನಾದರೂ ಭಕ್ಷ್ಯವನ್ನು ಕೊಡುವಳು.

ಈ ರೀತಿ ಅಜ್ಜಿಯ ಹತ್ತಿರದಲ್ಲಿ ವಾತ್ಸಲ್ಯಗೊಂಡವರಲ್ಲಿ ಶಿಲ್ಪಿಗಳ ಮೇಲಧಿಕಾರಿಯೂ ಒಬ್ಬನು. ವಿಮಾನದ ಕೆಲಸವು ಮುಗಿಯುವುದರಲ್ಲಿ ದ್ದಿತು. ಆಗ ಅವನಿಗೊಂದು ಯೋಚನೆ ತೋರಿತು. ಈ ದೇವಾಲಯದ ನಿರ್ಮಾಣ ಕೆಲಸದಲ್ಲಿ ಉಂಟಾಗುವ ಪುಣ್ಯದಲ್ಲಿ ಒಂದು ಭಾಗವನ್ನು ಮುದುಕಿಗೆ ಹಂಚಿಕೊಡಬೇಕೆಂದು ಯೋಚಿಸಿದನು.

"ಅಜ್ಜಿ, ನಾಳೆಗೆ ವಿಮಾನಕಾರ್ಯ ಮುಗಿಯುತ್ತದೆ. ಮೇಲೆ ಕಳಸ ವಿಡುವುದೊಂದೇ ಬಾಕಿ. ಇಷ್ಟೊಂದು ದಿವಸ ನೀನು ಬಹಳ ಶ್ರಮಪಟ್ಟು ನಮ್ಮ ದಾಹಶಾಂತಿಯನ್ನು ಮಾಡುತ್ತಿದ್ದೆ. ನಿನಗೆ ಅದರಿಂದ ಬಹಳ ಪುಣ್ಯ ವೂದಗಿದೆ. ನಿನ್ನ ವಸ್ತುವೆಂದು ಆ ಆಲಯದಲ್ಲಿ ಎಂದೆಂದಿಗೂ ನಿರಂತರ ವಾಗಿ ನೆಲೆಸಿರುವಂತಹ ಒಂದನ್ನು ಇಡಬೇಕು ಎಂದು ಆಶೆ. ಏನಾದರೂ ಕೊಡು" ಎಂದು ಶಿಲ್ಪಿಗಳ ಯಜಮಾನನು ಕೇಳಿದನು.

"ನಾನೇನು ಅಂತಹ ದೊಡ್ಡ ಕೆಲಸವನ್ನು ಮಾಡಿಬಿಟ್ಟೆನು ! ಕೊಳದ ಜಲವನ್ನು ಕುಡಿಯಿರೆಂದೆ, ಅಷ್ಟೇ ! ನೀವೆಲ್ಲರೂ ಎಷ್ಟೋ ಪುಣ್ಯವಂತರು. ಈ ಲೋಕ ನಿಮ್ಮನ್ನು ಹೊಗಳಿ ಕೀರ್ತಿಗಾನ ಮಾಡುವುದು. ಮಹಾರಾಜರ ಕೀರ್ತಿಯು ಲೋಕವಿರುವವರೆಗೂ ನೆಲೆಸಿರುವುದು" ಎಂದಳು ಮುದುಕಿ.

ಶಿಲ್ಪಿಗಳ ಯಜಮಾನನು ಅಜ್ಜಿಯನ್ನು ಅಷ್ಟಕ್ಕೇ ಸುಮ್ಮನೆ ಬಿಡಲಿಲ್ಲ. ಏನಾದರೂ ಕೊಟ್ಟೇ ತೀರಬೇಕೆಂದು ಒತ್ತಾಯಪಡಿಸಿದನು. "ನನ್ನ ಹತ್ತಿರ

ವೇನು ಚಿನ್ನ ಬೆಳ್ಳಿ ಇರುವುದೇ ? ಈ ಬೀದಿಯ ಬಾಗಿಲಿನ ಹತ್ತಿರದಲ್ಲಿ ಮೆಟ್ಟಿಲಾಗಿದೆಯಲ್ಲಾ, ಈ ಕಲ್ಲೇ ಸ್ವಲ್ಪ ಉಪಯೋಗವಾದೀತು. ಇದನ್ನು ಮಡಗಿಕೊಂಡು ನೀನು ಏನನ್ನು ಮಾಡುವೆ ?'' ಎಂದು ಮುದುಕಿ ಹೇಳಿದಳು.

''ಇದೇ ಸಾಕು ; ನಿನ್ನ ಪುಣ್ಯ ನೆಲೆಗೊಳ್ಳಲು ಇದೇ ಗುರುತಿನ ಕಲ್ಲಾಗಿರುವುದು'' ಎಂದು ಹೇಳಿ ಅವನು ಒಬ್ಬ ಆಳಿನ ಕೈಯಲ್ಲಿ ಆ ಕಲ್ಲನ್ನು ಕೀಳಿಸಿ ತೆಗೆಸಿಕೊಂಡು ಹೋದನು.

* * * *

ಗೋಪುರ ಗಗನವನ್ನು ಮುಟ್ಟುವಂತೆ ಎದ್ದು ನಿಂತಿತು. ರಾಜ ರಾಜನು ಒಬ್ಬ ಸೋಮಾರಿ ವೀರನು ಅವನು ಕೂಡ ಕೊರಳು ನೋಯುವಂತೆ ತಲೆಯೆತ್ತಿ ನೋಡಿದನು. ಅವನಿಗುಂಟಾದ ಆನಂದಕ್ಕೊಂದು ಮಿತಿಯುಂಟೆ? ತನ್ನ ಜೀವಮಾನದಲ್ಲಿ ಮುಖ್ಯವಾದೊಂದು ಕಾರ್ಯವನ್ನು ಸಾಧಿಸಿಕೊಂಡಂತೆ ಅವನಾದನು. ವಿಮಾನದ ಶಿಖರದಲ್ಲಿ ಕಳಸವು ಆವಿರ್ಭೂತವಾಯಿತು. ಆಲಯದ ಮೂರ್ತಿಗಳ ಪ್ರತಿಷ್ಠೆ ಬಹು ವಿಜೃಂಭಣೆಯೊಡನೆ ನೆರವೇರಿತು. ಆ ದೇವಾಲಯವು ಚೋಳದೇಶದ ಕಲಾಕೌಶಲ್ಯದ, ರಾಜ ರಾಜ ಚೋಳನ ಪ್ರೇಮದ, ಶಿಖರ. ರಾಜ ರಾಜೇಶ್ವರವೆಂಬ ಆ ಪುನೀತ ದೇವಾಲಯದ ವಿಮಾನವು ದೇವಲೋಕವನ್ನು ಕೈಯೆತ್ತಿ ಹಿಡಿಯಲಿಲ್ಲವೇ ಹೊರತು ಅದು ಮನುಷ್ಯಪ್ರಯತ್ನದ ಶಿಖರವನ್ನು ಕೈಯೆತ್ತಿ ಹಿಡಿದು ತೋರಿಸಿಬಿಟ್ಟಿತು. ಬೃಹದೀಶ್ವರರಿಗೆ ತಕ್ಕಂಥ ದೊಡ್ಡ ವಿಮಾನವಾಗಿ ಅದು ನಿರ್ಮಿಸಲ್ಪಟ್ಟಿದ್ದಿತು.

ಕುಂಭಾಭಿಷೇಕ ಜರುಗಿತು. ರಾಜ ರಾಜನ ಪಟ್ಟಾಭಿಷೇಕವೂ ಕೂಡ ಅಷ್ಟೊಂದು ವಿಜೃಂಭಣೆಯಿಂದ ನೆರವೇರಿರಲಿಲ್ಲ. ಅವನು ಪಟ್ಟಾಭಿಷಕ್ತನಾದದ್ದು ಚೋಳದೇಶದ ಹಕ್ಕನ್ನು ಹೊಂದುದಕ್ಕೆ ಮಾತ್ರವೇ ಗುರುತು. ಅದಕ್ಕನಂತರದಲ್ಲಿ ಅವನು ಹೊಂದಿದ ವಿಜಯ, ಅವನ ಹೃದಯಕಮಲದಲ್ಲಿ ಬೆಳೆದು ಬಂದ ಶಿವಭಕ್ತಿ, ಅವನಿಗೆ ಕಲೆಗಳ ಮೇಲಿದ್ದ ಅತೀವ ಪ್ರೇಮ ಇಷ್ಟಕ್ಕೂ ಕುಂಭಾಭಿಷೇಕ. ಅದು ಚೋಳ ಚಕ್ರವರ್ತಿಯ ವಿಜಯಪ್ರತಾಪವನ್ನೂ ಭಕ್ತಿಯನ್ನೂ ಪ್ರಶಂಸೆಯನ್ನೂ ಲೋಕವು ಅಂಗೀಕರಿಸುವ ಮಹೋತ್ಸವವಾಗಿ ಪರಿಗಣಿಸಲ್ಪಟ್ಟಿತು. ತಂಡತಂಡವಾದ ಜನಸಮುದ್ರದ ನಡುವೆ ಆ ಗೋಪುರ ಒಂದು ಹಡಗಿನ ಧ್ವಜಸ್ತಂಭದಂತೆ ನಿಂತಿದ್ದಿತು.

ರಾಜರಾಜನು ಅಂದು ಆನಂದಸಾಗರದಲ್ಲಿ ಮುಳುಗಿದ್ದನು. ಪರಮಾತ್ಮನು ತಾನು ನೆನೆದಿದ್ದ ಯೋಚನೆಯನ್ನು ನೆರವೇರಿಸಿ ಕರುಣಿಸಿದನೆಂಬ ಗರ್ವವು ಅವನ ಕಂಠದಲ್ಲಿ ಝೇಂಕರಿಸುತ್ತಿದ್ದಿತು. "ನಾವು ಕೃತಾರ್ಥರಾದೆವು" ಎಂಬ ತೃಪ್ತಿಯೊಡನೆ ಇರಲಾರದೆ, "ನಾವು ನಮ್ಮ ಪ್ರಯತ್ನದಿಂದ ಇದನ್ನು ಸಫಲಗೊಳಿಸಿದೆವು" ಎಂಬ ಅಹಂಕಾರವೂ ಆ ಪ್ರೇಮಮಯವಾದ ಮನಸ್ಸಿನಲ್ಲಿ ಮೊಳೆತುಕೊಂಡಿತು

ರಾತ್ರಿ ಅವನು ಹಂಸತೂಲಿಕಾತಲ್ಪದಲ್ಲಿ ಮಲಗಿದನು. ನಿದ್ರೆ ಬರಲೊಲ್ಲದು. ಮನಸ್ಸು ಆನಂದದ ಅಲೆಗಳಿಂದ ಅಲ್ಲೋಲಕಲ್ಲೋಲವಾಗಿದ್ದಿತು. ಅದು ಸ್ವಲ್ಪ ಶಾಂತಿ ಹೊಂದಲು ನಿದ್ರಾದೇವಿಯ ವಶನಾದನು.

* * * *

"ಪ್ರಭೋ! ಈ ದೀನನ ಸಂಕಲ್ಪವನ್ನು ನೆರವೇರಿಸಿ ಕರುಣಿಸಿದ ಮಹಿಮೆಯನ್ನು ನಾನು ಪರಿಪರಿಯಾಗಿ ಹೊಗಳುವುದನ್ನು ಹೊರತು ಮತ್ತೇನು ನನ್ನ ಕೈಲಾದೀತು!" ಎಂದು ರಾಜರಾಜನು ಪರಮಾತ್ಮನನ್ನು ಪ್ರಾರ್ಥಿಸುತ್ತ ಆನಂದಬಾಷ್ಪವನ್ನು ಸುರಿಸಿದನು.

ಅವನ ಮುಂದೆ ಬೃಹದೀಶ್ವರಸ್ವಾಮಿ ಪ್ರತ್ಯಕ್ಷರಾಗಿ ನಿಂತರು. "ನೀನು ಮಾಡಿದ್ದೆಲ್ಲವೂ ಒಳ್ಳೆಯದೇ ಹೌದು. ನೀನು ಪ್ರೇಮಪೂರ್ವಕವಾಗಿ ನಿರ್ಮಿಸಿದ ಆಲಯದಲ್ಲಿ ಮುದುಕಿಯೊರ್ವಳ ನೆರಳಲ್ಲಿ ನಾವು ಕ್ಷೇಮದಿಂದಿರುವೆವು." ಈ ರೀತಿಯಾಗಿ ಪರಮಾತ್ಮನು ನುಡಿದು ಅಂತರ್ಧಾನವನ್ನೈದಿದನು.

ರಾಜನು ಬೆಚ್ಚಿಬಿದ್ದು ಕಣ್ಣನ್ನು ತೆರೆದನು. ಅವನ ದೇಹಾದ್ಯಂತವೂ ರೋಮಾಂಚಿತವಾಯಿತು. ಬೆವರು ಹನಿಯಿತು. "ಪರಮಾತ್ಮನು ಕನಸಿನಲ್ಲಿ ಪ್ರತ್ಯಕ್ಷನಾದನು. ನಮ್ಮ ದೇವಾಲಯದಲ್ಲಿ ನೆಲೆಸಿದನು. ಇದು ನಾನು ಮಾಡಿದ ಪುಣ್ಯ!" ಎಂದು ಅವನು ಕುತೂಹಲಗೊಂಡನು. ಆದರೆ ಆ ಕುತೂಹಲವು ಪರಿಪೂರ್ಣತೆಯನ್ನು ಪಡೆಯಲಿಲ್ಲ. ಅದರಲ್ಲಿ ಒಂದು ಕೊರತೆಯಿದ್ದಿತು; "ಮುದುಕಿಯ ನೆರಳಲ್ಲಿ ಇರುವುದಾಗಿ ಭಗವಂತನು ಕರುಣಿಸಿದನಲ್ಲ; ಅದು ಏಕೆ?" ಎಂದು ಆಲೋಚಿಸ ತೊಡಗಿದನು. 'ನಾವು ನಿರ್ಮಿಸಿದ ದೇವಾಲಯದಲ್ಲಿ ಮುದುಕಿಯ ನೆರಳೆಲ್ಲಿ ಬಂದಿತು? ಮುದುಕಿ

ಯಾರು ? ಅವಳು ಎಲ್ಲಿರುವಳು ?' ಎಂಬ ಪ್ರಶ್ನೆಗಳು ಅವನ ಹೃದಯದಲ್ಲಿ ಉದ್ಭವಿಸಿದವು. "ಅವಳು ಯಾರು ?" ಎಂದು ಹಲವು ಸಾರಿ ತನಗೆ ತಾನೇ ಪ್ರಶ್ನಿಸಿಕೊಂಡನು. ಹೇಳುವವರಾರು?

ರಾಜನು ಕಂಡ ಕನಸು ಮಂತ್ರಿವರ್ಯರಿಗೂ ತಿಳಿಯಿತು. ಅವರು ವಿಚಾರಿಸತೊಡಗಿದರು. ರಾಜನಿಗಿದ್ದ ಹುರುಪು ಉತ್ಸಾಹಗಳಿಗೆ ಹಠಾತ್ತಾಗಿ ತಡೆಯೊದಗಿತು. "ಭಗವಂತನ ಹೃದಯಕಮಲದಲ್ಲಿರುವ ಆ ವೃದ್ಧ ಪುಣ್ಯವತಿಯಾರು ?" ಎಂದು ದೊರೆ ಪುನಃ ಪುನಃ ಪ್ರಶ್ನಿಸಿಕೊಳ್ಳುತ್ತಲೇ ಇದ್ದನು.

ಶಿಲ್ಪಿಗಳ ಯಜಮಾನನು ಮಾತ್ರವೇ ಈ ರಹಸ್ಯವನ್ನು ಅರಿತಿರುವನು. ದೊರೆ ಬಹಳ ಚಿಂತೆಯಲ್ಲಿ ಮುಳುಗಿರುವುದನ್ನು ತಿಳಿದು ಅವನು ದೊರೆಯ ಹತ್ತಿರಕ್ಕೆ ಹೋದನು. ವಿಷಯವನ್ನು ಹೊರಗೆಡಹಲು ಅವನ ಮನಸ್ಸು ಧೈರ್ಯ ಹೊಂದಲಿಲ್ಲ. ತಾನು ಮಾಡಿದ ಕೆಲಸವು ಧನ್ಯತೆಗೆ ಗುರುತಾಗಿದ್ದರೂ ದೊರೆ ಅದನ್ನು ದೊಡ್ಡ ತಪ್ಪಿತವೆಂಬುದಾಗಿ ತಿಳಿಯುವನೋ ಎಂದು ಅವನು ಹೆದರಿದನು. ಅನಂತರದಲ್ಲಿ ಒಂದು ರೀತಿಯಾಗಿ ಸಮಾಧಾನ ತಂದುಕೊಂಡು ದೊರೆಯ ಹತ್ತಿರ ಈ ರೀತಿಯಾಗಿ ಹೇಳತೊಡಗಿದನು :—

"ಮಹಾರಾಜರೇ, ನಾವು ವಿಮಾನದ ಕೆಲಸವನ್ನು ಮಾಡುತ್ತಿದ್ದ ಕಾಲದಲ್ಲಿ ನಮಗೆ ತಂಪಾದ ಸಿಹಿನೀರನ್ನು ತಂದುಕೊಟ್ಟು ಮುದುಕಿಯೊಬ್ಬಳು ನಮ್ಮ ಬಾಯಾರಿಕೆಯನ್ನು ಹೋಗಲಾಡಿಸುತ್ತಿದ್ದಳು. ಆಕೆಗೆ ಪ್ರತ್ಯುಪಕಾರವಾಗಿ ನಮ್ಮಿಂದ ಏನೂ ಮಾಡಲಾಗಲಿಲ್ಲ. ಆಕೆಯ ವಸ್ತುವೊಂದನ್ನು ಈ ದೇವಾಲಯದಲ್ಲಿ ಸೇರಿಸಿಬಿಡಬೇಕೆಂದು ಯೋಚಿಸಿ ಆಕೆಯನ್ನು ಹೋಗಿ ಕೇಳಿದೆನು. ಆಕೆಯು ತನ್ನ ಮನೆಯ ಮುಂಭಾಗದಲ್ಲಿದ್ದ ಹೊಸಲು ಕಲ್ಲನ್ನು ಕೊಟ್ಟಳು. ವಿಮಾನವು ಮುಕ್ತಾಯ ಹೊಂದುವುದರಲ್ಲಿತ್ತಾದುದರಿಂದ ವಿಮಾನದ ಶಿಖರದ ಕಲ್ಲನ್ನಾಗಿ ಅದನ್ನು ಇಟ್ಟೆನು. ಅದು ಅಲ್ಲಿ ಚೆನ್ನಾಗಿ ಹೊಂದಿಕೊಂಡಿತು." ಎಂದು ಅವನು ಹೇಳಿ ಮುಗಿಸುವುದರೊಳಗೆ ರಾಜನು, "ಹಾ ! ಹಾ !" ಎಂದು ಆನಂದಿತನಾದನು. ಅವನ ನೇತ್ರಗಳು ಸಜಲವಾದುವು. ಸ್ವಲ್ಪಕಾಲ ಅವನು ಮೈ ಮರೆತುಹೋದನು.

ಅವನ ಗರ್ವ ಭಂಗಹೊಂದಿತು. ಅಷ್ಟೊಂದು ಪ್ರಯತ್ನಪಟ್ಟು ಅವನಿಂದ ನಿರ್ಮಿಸಲ್ಪಟ್ಟ ದೇವಾಲಯಲ್ಲಿ ದೇವದೇವನು ನೆಲೆಸಿ ಕೂಡ ಫಲವನ್ನು ನಿರೀಕ್ಷಿಸದೆ ಪ್ರೀತಿಯನ್ನು ತೋರಿಸಿದ ಮುದುಕಿಯೇ ದೇವದೇವನಿಗೆ ನೆರಳನ್ನು ಕೊಡುವ ಭಾಗ್ಯವನ್ನು ಹೊಂದಿದಳು.

"ಹಾಗೇನು? ನಿಮಗೆ ಜಲಪಾನವನ್ನೂ ಭಗವಂತನಿಗೆ ನೆರಳನ್ನೂ ಕೊಟ್ಟಂಥ ಪುಣ್ಯವತಿಯ ದರ್ಶನವನ್ನು ನಾನು ಮಾಡಬೇಕು" ಎಂದನು ರಾಜನು.

ಮುದುಕಿ ಬಂದಳು. "ತಾಯೀ! ನಿನ್ನ ಕೀರ್ತಿಯ ಮಹಿಮೆಯೇ ಮಹಿಮೆ! ನಮ್ಮ ಮನಸ್ಸಿನಲ್ಲಿ ಭಗವಂತನಿರುವನು. ಅವನ ಹೃದಯ ಕಮಲದಲ್ಲಿ ನೀನಿರುವೆ. ನಿನ್ನ ಪ್ರೀತಿಯ ನೆರಳಿನಲ್ಲಿ ಅವನು ವಾಸಿಸುತ್ತಾನೆ. ನಾನು ಕಟ್ಟಿಸಿದೆನೆಂದು ಅಹಂಕಾರ ಪಡುತ್ತಿದ್ದ ಆ ದೊಡ್ಡ ದೇವಸ್ಥಾನದಲ್ಲಿ ನನ್ನ ಅಹಂಕಾರದ ಸುಳಿವೇ ಆವರಿಸಿಕೊಂಡಿದೆ. ಅದರ ನಡುವೆ ನಿನ್ನ ಸ್ವಾರ್ಥತ್ಯಾಗದ ಗುರುತಾದ ಆ ಕಲ್ಲಿನ ನೆರಳಿನಲ್ಲಿ, ನಿನ್ನ ಅಜೇಯವಾದ ಪ್ರೇಮವೆಂಬ ಛತ್ರಿಯ ಕೆಳಗೆ, ನಮ್ಮ ಕುಲದೈವ, ಚೋಳಮೂರ್ತಿ, ವಿಶ್ವವೇ ತನ್ನ ಆಕೃತಿಯಾದ ಬೃಹದೀಶ್ವರನು ಸಂತೋಷಭರಿತನಾಗಿ ನೆಲಸಿರುವನು. ನಿನಗೆ ಜಯವಾಗಲಿ!" ದೊರೆ ಈ ರೀತಿಯಾಗಿ ತನ್ನ ಹೃದಯವನ್ನು ಬಿಚ್ಚಿ ನುಡಿದನು. ಸಕಲರೂ ದಿಗ್ಭ್ರಮೆಗೊಂಡರು.

* * * *

ಮುದುಕಿಯು ಈಗ ಹಳೆಯ ಮುದುಕಿಯಾಗಿರಲಿಲ್ಲ. ಅವಳು ರಾಜ ಕುಟುಂಬದಲ್ಲಿ ಒಬ್ಬಳಂತೆ ಬಾಳತೊಡಗಿದಳು.

## ಶರತ್ ಸಾಹಿತ್ಯ

| | | | | | |
|---|---|---|---|---|---|
| ೧. ಪ್ರೇಮಯೋಗಿನಿ : ಸಿ. ಕೆ. ನಾಗರಾಜರಾವ್ | | .. | ೦ | ೪ | ೦ |
| ೨. ಅರಕ್ಷಣೀಯ | ,, | .. | ೦ | ೧೨ | ೦ |
| ೩. ಕಾಶೀನಾಥ | ,, | .. | ೦ | ೬ | ೦ |
| ಕಾಡುಮಲ್ಲಿಗೆ | ,, | .. | ೦ | ೮ | ೦ |
| ಚಂದ್ರಗ್ರಹಣ ಮತ್ತು ಇತರ ಕಥೆಗಳು — ಆನಂದ | | .. | ೦ | ೧೦ | ೦ |
| ಪಾರ್ವತೀಬಾಯಿ ಆಠವ್ಳೆ — ಎಚ್. ವೈ. ಸರಸ್ವತಿ | | .. | ೦ | ೧೦ | ೦ |

ಕನ್ನಡದಲ್ಲಿ ಮತ್ತು ಇಂಗ್ಲೀಷಿನಲ್ಲಿ ರಾಷ್ಟ್ರೀಯ ಸಾಹಿತ್ಯ
ಮತ್ತು
ಇತರ ಎಲ್ಲ ಕನ್ನಡ ಪುಸ್ತಕಗಳೂ ನಮ್ಮಲ್ಲಿ ದೊರೆಯುತ್ತವೆ.

# ಸತ್ಯಶೋಧನ ಪುಸ್ತಕ ಭಂಡಾರ

**ಕೋಟೆ, ಬೆಂಗಳೂರು ನಗರ**